# ಮಹಾಕವಿ ಕುಮಾರನಾಶಾನ್

ಬಿ. ಕೆ. ತಿಮ್ಮಪ್ಪ
ಟಿ. ವೆಂಕಟಲಕ್ಷ್ಮಿ



ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

MAHAKAVI KUMARANASHAN
by Sri B. K. Thimmappa & Smt T. Vekatalakshmi.
Published by the Bangalore University, Bangalore

ಪ್ರಧಾನ ಸಂಪಾದಕರು : ಡಾ|| ಜಿ. ಎಸ್. ಶಿವರುದ್ರಪ್ಪ



ಪ್ರಕಾಶಕರು :
**ಕೆ. ಸಿ. ಶಿವಪ್ಪ**
ಉಪ-ನಿರ್ದೇಶಕ
ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ
'ಜ್ಞಾನಭಾರತಿ', ಬೆಂಗಳೂರು-560056

ಬೆಲೆ : 25 ಪೈಸೆ

ಮುದ್ರಣ :
ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ

# ಮುನ್ನುಡಿ

ವಿಶ್ವವಿದ್ಯಾಲಯಗಳು ಕೇವಲ ತಿಳುವಳಿಕೆಯ ಕೇಂದ್ರಗಳಾದರೆ ಸಾಲದು. ಅವು ಸುತ್ತಮುತ್ತಲಿನ ಜನತೆಯ ಶೈಕ್ಷಣಿಕ-ಸಾಂಸ್ಕೃತಿಕ ಆಗುಹೋಗುಗಳಲ್ಲಿ ಸಹ ಸಕ್ರಿಯವಾಗಿ ಪಾಲ್ಗೊಳ್ಳುವುದು ಆವಶ್ಯಕ. ಪಾಠಪ್ರವಚನ, ಉನ್ನತ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ಮಾತ್ರ ವಿಶ್ವವಿದ್ಯಾಲಯಗಳ ಕಾರ್ಯವ್ಯಾಪ್ತಿ ಸೀಮಿತವಾಗಿರಬಾರದು. ಸಾಮಾನ್ಯ ಜನತೆಯಲ್ಲಿ ಅರಿವಿನ ಸಿರಿಯನ್ನು ಹಂಚುವ ಹೊಣೆ ಹೊತ್ತು ವಿಶ್ವವಿದ್ಯಾಲಯಗಳು ಜ್ಞಾನಪ್ರಸಾರ ಕೇಂದ್ರಗಳಾಗಿ ಮುನ್ನಡೆಯಬೇಕು.

ಬೆಂಗಳೂರು ವಿಶ್ವವಿದ್ಯಾಲಯವು ಕಳೆದ ನಾಲ್ಕೈದು ವರ್ಷಗಳಿಂದ ನಗರದ ನಾನಾ ಸಂಘಸಂಸ್ಥೆಗಳಲ್ಲಿ, ಕಾರ್ಖಾನೆ ಕಾರ್ಮಿಕ· ಕೂಟಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸುತ್ತ ಬಂದಿದೆ. ಆಯಾ ವಿಷಯಗಳಲ್ಲಿ ಪರಿಣತರಾದವರು ಭಾಷಣಗಳನ್ನು ನೀಡಿ,ಅನಂತರ ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು ನಮ್ಮೊಡನೆ ಸಹಕರಿಸುತ್ತಿರುವುದು ಸಂತಸದ ಸಂಗತಿ. ಅತ್ಯಧಿಕ ಸಂಖ್ಯೆಯಲ್ಲಿ ನಮ್ಮ ಜನತೆಯ ಕೈಸೇರಲೆಂದು ಈ ಕಿರುಹೊತ್ತಿಗೆಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸುತ್ತಿದ್ದೇವೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಶ್ರೀಮಂತಿಕೆಯನ್ನು ಹೆಚ್ಚಿಸಿ, ಜನಸಾಮಾನ್ಯರ ತಿಳಿವನ್ನು ಉತ್ತಮಗೊಳಿಸುವ ದಿಸೆಯಲ್ಲಿ ಈ ಹೊತ್ತಿಗೆಗಳು ಸಹಕಾರಿಯಾಗಲೆಂದು ನಾನು ಮನಸಾರೆ ಹಾರೈಸುತ್ತೇನೆ.

**ಎಚ್. ನರಸಿಂಹಯ್ಯ**
ಉಪಕುಲಪತಿ
ಬೆಂಗಳೂರು ವಿಶ್ವವಿದ್ಯಾಲಯ

## ಅರಿಕೆ

ಮಲಯಾಳ ಸಾಹಿತ್ಯದಲ್ಲಿ ಎ. ಆರ್. ರಾಜರಾಜವರ್ಮರ ನಂತರ ರೊಮಾಂಟಿಕ್ ಪ್ರಸ್ಥಾನ ಅದರ ಪಾರಮ್ಯವನ್ನು ತಲಪಿದುದು, ಕುಮಾರನಾಶಾನ್, ವಳ್ಳತ್ತೋಳ್ ಮತ್ತು ಉಳ್ಳೂರ್ – ಈ ಕವಿತ್ರಯರ ಕಾಲದಲ್ಲಿ. ಈ ಮೂವರು ಸಮಕಾಲೀನ ಮಹಾಕವಿಗಳೂ ಕಾವ್ಯಕ್ಷೇತ್ರವನ್ನು ಪ್ರವೇಶಿಸಿದುದು ಕ್ಲಾಸಿಕ್ ಸಂಪ್ರದಾಯದ ಮೂಲಕ. ಅನಂತರ ಕ್ರಮೇಣ ರೊಮಾಂಟಿಕ್ ಪ್ರಸ್ಥಾನವನ್ನು ಬೆಳೆಸಿ ಮಲಯಾಳ ಕಾವ್ಯ ಕ್ಷೇತ್ರದ ಸಂವೃದ್ಧಿಗೆ ಕಾರಣರಾದ ಸೀಮಾಪುರುಷರು.

ಕುಮಾರನ್ ಆಶಾನ್ ಮಹಾಕಾವ್ಯಗಳನ್ನು ಬರೆಯದಿದ್ದರೂ ಖಂಡಕಾವ್ಯಗಳಿಂದಲೇ ಮಹಾಕವಿ ಪೀಠಕ್ಕೇರಿದರು. ಬೆಂಗಳೂರು ಮತ್ತು ಕಲ್ಕತ್ತದಲ್ಲಿ ಸಂಸ್ಕೃತ ವಿದ್ಯಾಭ್ಯಾಸಮಾಡಿ ಕೇರಳಕ್ಕೆ ಹಿಂದಿರುಗಿದ ಕುಮಾರನ್ ಆಶಾನ್, ಕಾವ್ಯಕ್ಷೇತ್ರಕ್ಕೆ ಪ್ರವೇಶಿಸಿದುದು ಅವರ ನಲವತ್ತೈದನೆಯ ವಯಸ್ಸಿನಲ್ಲಿ, ಸಮಾಜೋದ್ಧಾರ ಕಾರ್ಯ, ಪತ್ರಿಕಾ ವ್ಯವಸಾಯ, ಕಾವ್ಯ ರಚನೆ – ಹೀಗೆ ಅನೇಕ ಕಾರ್ಯರಂಗಗಳಲ್ಲಿ ಸದಾ ಕಾರ್ಯತತ್ಪರರಾಗಿದ್ದ ಆಶಾನ್ ಒಬ್ಬ ಆಧ್ಯಾತ್ಮಿಕ ಕವಿ; ಕೇರಳದ ಒಬ್ಬ ಆರಾಧ್ಯಮೂರ್ತಿ.

ಕುಮಾರನಾಶಾನರ ಖಂಡಕಾವ್ಯಗಳನ್ನು ಮಾತ್ರ ಈ ಚಿಕ್ಕ ಕೃತಿಯಲ್ಲಿ ಶಕ್ತಿಮೀರಿ ಪರಿಶೀಲಿಸಲು ಪ್ರಯತ್ನಿಸಿದ್ದೇವೆ.

ನಮ್ಮ ಪೂಜ್ಯ ಗುರುಗಳಾದ ಡಾ॥ ಜಿ. ಎಸ್. ಶಿವರುದ್ರಪ್ಪ ನವರು ಬೆಂಗಳೂರು ವಿಶ್ವವಿದ್ಯಾಲಯದ ಪ್ರಚಾರೋಪನ್ಯಾಸ ಮಾಲೆಯಲ್ಲಿ ಈ ಕಿರುಹೊತ್ತಗೆಯನ್ನು ಪ್ರಕಟಿಸಿ ನಮ್ಮನ್ನು ಪ್ರೋತ್ಸಾಹಿಸಿದುದಕ್ಕೆ ನಾವು ಕೃತಜ್ಞರಾಗಿದ್ದೇವೆ. ಪ್ರಚಾರೋಪನ್ಯಾಸಮಾಲೆಯ ಸಂಪಾದಕ ಮಂಡಲಿಗೂ ನಮ್ಮ ಕೃತಜ್ಞತೆಗಳು.

ಕಾಸರಗೋಡು
6-6-1974

ಬಿ. ಕೆ. ತಿಮ್ಮಪ್ಪ
ಟಿ. ವೆಂಕಟಲಕ್ಷ್ಮಿ

## ಹಿನ್ನೆಲೆ

---

### ಮಲಯಾಳ ಖಂಡಕಾವ್ಯಗಳು

ಮಲಯಾಳ ಪದ್ಯಸಾಹಿತ್ಯದಲ್ಲಿ ಮಹಾಕಾವ್ಯಗಳು ಮತ್ತು ಖಂಡಕಾವ್ಯಗಳು ಎಂದು ಎರಡು ಪ್ರಧಾನ ಶಾಖೆಗಳಿವೆ. ಖಂಡಕಾವ್ಯಗಳ ಸಾಲಿನಲ್ಲಿ ಅತ್ಯಂತ ಪ್ರಾಚೀನವಾದುವು 'ಪದ್ಯ ರತ್ನ' ಮತ್ತು 'ಕಾಣೋತ್ತರ' ಕಾವ್ಯಗಳು. ಖಂಡಕಾವ್ಯಗಳ ಮುಖಮುದ್ರೆ ಇವುಗಳ ಮೇಲೆ ಬಿದ್ದಿರುವುದೇ ಅದಕ್ಕೆ ಕಾರಣ. ಮಲಯಾಳದಲ್ಲಿ ರಚಿತವಾದ ಸಂದೇಶ ಕಾವ್ಯಗಳಲ್ಲಿ 'ಕುಚೇಲ ವೃತ್ತ' ಖಂಡಕಾವ್ಯವೆನ್ನಿಸಿಕೊಳ್ಳುತ್ತದೆಯಾದರೂ ಅದೊಂದು ಆಖ್ಯಾನ ಕಾವ್ಯವೆನ್ನುವುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಅನಂತರ ಹುಟ್ಟಿಕೊಂಡ ವೆಣ್ಮಣಿ* ಪ್ರಸ್ಥಾನ ಆಧುನಿಕ ಲಘು ಕಾವ್ಯಗಳಿಗೆ ಹೊಸಹಾದಿಯನ್ನು ನಿರ್ಮಿಸಿಕೊಟ್ಟಿತು.

ವೆಣ್ಮಣಿಯ 'ಪೂರಪ್ರಬಂಧ' ಮತ್ತು 'ಅಂಬೋಪದೇಶ'ದಿಂದ ಮೊದಲುಗೊಂಡು ವಿವಿಧ ಕವಿಗಳ 'ನಲ್ಲಭಾಷ', 'ಪಾಲುಳ್ಳಿ ಚರಿತಂ', 'ತುಪ್ಪಲ್ ಕೊಳಾಂಬಿ', 'ದೈವಯೋಗಂ', 'ಮಯೂರ ಸಂದೇಶ', 'ಕೋಮಪ್ಪನ್', 'ಚೆರಿಯ ಶಕ್ತನ್ ತಂಬುರಾನ್', 'ಪಾಕ್ಕನಾರ್', 'ಕಣ್ಣನ್', 'ಸಾಂಬನ್', 'ಅಗಪೂರ್ ಚಾತ್ತನ್', 'ವಡುತಲ ನಾಯರ್', 'ವಿನೋದಿನಿ',

---

* ವೆಣ್ಮಣಿ ಮನೆತನದ ಕವಿಗಳಿಂದ ಹುಟ್ಟಿಕೊಂಡ ಕಾವ್ಯಪ್ರಭೇದ

‘ಅಂತರ್ಜನ್ಮತ್ತಿಂಡೆ ಅಪರಾಧಂ’, ‘ಒರು ಪೋಲೀಸ್ ಇನ್ಸ್‌ಪೆಕ್ಟ-ರುಡೆ ವಧ’, ‘ಒರುಪತಿವ್ರತಯುಡೆ ಕಥ’– ಮುಂತಾದುವುಗಳೆಲ್ಲವೂ ಲಘುಕಾವ್ಯಗಳೆನ್ನಿಸಿಕೊಂಡಿದ್ದರೂ ಇವುಗಳನ್ನು ಖಂಡಕಾವ್ಯಗಳ ಸಮೂಹಕ್ಕೊಳಪಡಿಸಬಹುದು.

ಚಾರಿತ್ರಿಕ ದೃಷ್ಟಿಯಿಂದ ಮಲಯಾಳದ ಖಂಡಕಾವ್ಯಗಳನ್ನು ವಿಭಾಗಿಸಿ ನೋಡಿದರೆ ಕ್ಲಾಸಿಕ್ ಸಂಪ್ರದಾಯದಲ್ಲಿ ರಚಿತವಾದ ಕಾವ್ಯಗಳನ್ನು ಪ್ರಾಚೀನವೆಂದೂ, ರೊಮಾಂಟಿಕ್ ಸಂಪ್ರದಾಯದ ಕಾವ್ಯಗಳನ್ನು ಆಧುನಿಕವೆಂದೂ ಹೇಳಬೇಕಾಗುತ್ತದೆ. ‘ಕುಚೇಲವೃತ್ತ’ದ ರಚನೆಯ ಕಾಲದಿಂದ ಎ. ಆರ್. ರಾಜರಾಜವರ್ಮರು ಕಾವ್ಯರಚನೆಗೆ ತೊಡಗುವವರೆಗಿನ ಲಘುಕಾವ್ಯಗಳನ್ನೆಲ್ಲ ಕ್ಲಾಸಿಕ್ ಸಂಪ್ರದಾಯದ ಕಾವ್ಯಗಳೆಂದೂ ಎ. ಆರ್. ರಾಜರಾಜವರ್ಮರಿಂದ ರಚಿತವಾದ ಲಘುಕಾವ್ಯಗಳಿಂದ ಪ್ರಾರಂಭವಾಗುವ ಕಾವ್ಯ ಸಂಪ್ರದಾಯಕ್ಕೆ ರೊಮಾಂಟಿಕ್ ಪಂಥದ ಕಾವ್ಯಗಳೆಂದೂ ಸ್ಥೂಲವಾಗಿ ಹೇಳಬಹುದು. ಮಲಯಾಳದ ಕ್ಲಾಸಿಕ್ ಸಂಪ್ರದಾಯದ ಕಾವ್ಯಗಳನ್ನು ಆಖ್ಯಾನಕಾವ್ಯಗಳು ಎಂದೂ ಕರೆಯಬಹುದು. ಆದರೆ ರೊಮಾಂಟಿಕ್ ಪಂಥದ ಕಾವ್ಯಗಳನ್ನು ಆಖ್ಯಾನಕಾವ್ಯಗಳೆಂದು ಕರೆಯುವಂತಿಲ್ಲ.

ಪಾಶ್ಚಾತ್ಯ ಸಾಹಿತ್ಯ ಸಂಪರ್ಕದಿಂದಾಗಿ ಇಂಗ್ಲಿಷ್ ವಿದ್ಯಾ-ಭ್ಯಾಸವನ್ನು ಪಡೆದಿದ್ದ ಮಲಯಾಳ ಕವಿಗಳಿಗೆ ಈ ಹೊಸ ಮಾರ್ಗವನ್ನು ಅನುಕರಿಸಲು ಅವಕಾಶವುಂಟಾಯಿತು. ಅತಿ ದೀರ್ಘಗೊಳಿಸದೆ ಅಪ್ರಧಾನವಾದ ಭಾಗಗಳನ್ನು ಸೂಚ್ಯರೂಪದಲ್ಲಿ ತಿಳಿಸಿ ನಾಟಕೀಯ ಶೈಲಿ ಅಥವಾ ಕಾವ್ಯ ಶೈಲಿಯಲ್ಲಿ ಕಥಾವಸ್ತುವನ್ನು ಅಳವಡಿಸುವುದು ಮಲಯಾಳದ ಆಧುನಿಕ ಖಂಡಕಾವ್ಯಗಳ ಸಾಮಾನ್ಯಲಕ್ಷಣವಾಯಿತು. ಇದಲ್ಲದೆ ಇಂಗ್ಲಿಷ್

ಸಾಹಿತ್ಯದ 'ಎಲಿಜಿ' (ಶೋಕ ಗೀತೆ)ಗಳ ಅನುಕರಣೆಯಿಂದಾಗಿ ಮಲಯಾಳ ಸಾಹಿತ್ಯದಲ್ಲಿ 'ವಿಲಾಪ ಕಾವ್ಯಗಳು' ಎನ್ನುವ ಮತ್ತೊಂದು ಕಾವ್ಯ ಪ್ರಕಾರವೂ ಜನ್ಮ ತಾಳಿತು. ಈ 'ವಿಲಾಪ ಕಾವ್ಯ'ಗಳೂ ಆಧುನಿಕ ಖಂಡಕಾವ್ಯಗಳ ಸಮೂಹದಲ್ಲಿ ಸೇರುವಂತಾದುವು.

ಆಧುನಿಕ ಖಂಡಕಾವ್ಯಬ್ರಹ್ಮರಾದ ಎ. ಆರ್. ರಾಜರಾಜ ವರ್ಮರ 'ಮಲಯ ವಿಲಾಸ' ಈ ಸಂಪ್ರದಾಯಕ್ಕೆ ನಾಂದಿ ಹಾಕಿಕೊಟ್ಟಿತು. ಎ. ಆರ್. ಆರ್. ರಚಿಸಿದ ಮತ್ತೊಂದು ಖಂಡಕಾವ್ಯ 'ಪ್ರಿಯವಿಲಾಪಂ'. ಇದು ಅಶ್ವತಿರುನಾಳ್ ಮಹಾರಾಜರು ದೈವಾಧೀನರಾದಾಗ ರಚಿಸಿದ ಶೋಕಾತ್ಮಕ ಕಾವ್ಯ. ಟೆನಿಸನ್ ಕವಿಯ 'ಇನ್ ಮೆಮೊರಿ'ಕವಿತೆಯ ಪ್ರಭಾವವನ್ನು ಈ ಕಾವ್ಯದಲ್ಲಿ ಗುರುತಿಸಬಹುದು. ಕೆ. ಸಿ. ಕೇಶವ ಪಿಳ್ಳೆಯ 'ಆಸನ್ನ ಮರಣ ಚಿಂತಾ ಶತಕಂ', ಸಿ. ಎಸ್. ಸುಬ್ರಹ್ಮಣ್ಯ ಪೋಟ್ಟಿ ಅವರ 'ಒರುವಿಲಾಪಂ' (ತಮ್ಮ ಮಗು ತೀರಿಕೊಂಡಾಗ ರಚಿಸಿದ ಶೋಕಾತ್ಮಕ ಕಾವ್ಯ) ಖಂಡಕಾವ್ಯಗಳ ಬೆಳವಣಿಗೆಯ ಮಾರ್ಗವನ್ನು ಮತ್ತಷ್ಟು ವಿಸ್ತಾರಗೊಳಿಸಿದುವು.

ಅನಂತರ ರಚನೆಗೊಂಡ ವಿ. ಸಿ. ಬಾಲಕೃಷ್ಣ ಪಣಿಕ್ಕರರ 'ಒರುವಿಲಾಪಂ' ಖಂಡಕಾವ್ಯವೂ ಶೋಕಾತ್ಮಕ ಕಾವ್ಯವೇ. ಸಾಂಕ್ರಾಮಿಕ ರೋಗಕ್ಕೊಳಗಾಗಿ ಮರಣೋನ್ಮುಖಳಾದ ಪ್ರಿಯೆಯ ಪಕ್ಕದಲ್ಲಿ ಕುಳಿತು ಅನುಭವಿಸಿದ ಮನೋವೇದನೆ 'ಒರುವಿಲಾಪಂ' ಕಾವ್ಯವಾಗಿ ಸೃಷ್ಟಿಗೊಂಡಿತು.

## ಮಹಾಕವಿತ್ರಯರು

ಕುಮಾರನಾಶಾನ್, ವಳ್ಳತ್ತೋಳ್, ಉಳ್ಳೂರ್–ಈ ಮಹಾ

ಕವಿತ್ರಯರಿಂದ ಮಲಯಾಳ ಖಂಡಕಾವ್ಯಗಳ ರಚನೆ ಅತ್ಯುನ್ನ
ಗೇರಿತು. ವಳ್ಳತ್ತೋಳ್ ಮತ್ತು ಉಳ್ಳೂರ್‌ರರು ಖಂಡಕಾವ
ಗಳನ್ನಲ್ಲದೆ ಮಹಾಕಾವ್ಯಗಳನ್ನೂ ರಚಿಸಿದ್ದಾರೆ. ಆದರೆ ಕುಮಾ
ನಾಶಾನರು ಮಹಾಕವಿಯೆನ್ನಿಸಿಕೊಂಡದ್ದು ಬೃಹದ್ ಗ್ರಂ
ನಿರ್ಮಾಣದಿಂದಲ್ಲ, ಖಂಡಕಾವ್ಯಗಳಿಂದ.'ವೀಣಪ್ಪೂವು', 'ನಳಿನಿ'
'ಪ್ರರೋದನಂ', 'ಲೀಲ', 'ಚಿಂತಾವಿಷ್ಟಯಾಯ ಸೀತ'
'ಚಂಡಾಲ ಭಿಕ್ಷುಕಿ', 'ದುರವಸ್ಥ', 'ಕರುಣ' ಈ ಅಷ್ಟಕಾವ್ಯಗ
ರಚನೆಯಿಂದ ಕುಮಾರನಾಶಾನ್ ಮಲಯಾಳ ಮಹಾಕವಿ ಪೀ
ವನ್ನೇರಿದರು.

ವಳ್ಳತ್ತೋಳರೂ ಕುಮಾರನಾಶಾನರಂತೆ ಎ. ಆರ್. ರಾ
ರಾಜವರ್ಮರ ಕಾವ್ಯಪಂಥಕ್ಕೆ ಸೇರಿದವರು. ವಳ್ಳತ್ತೋಳ
'ಬದಿರ ವಿಲಾಪಂ', 'ಗಣಪತಿ', 'ಬಂಧನಸ್ಥನಾಯ ಅ
ರುದ್ಧನ್', 'ಶಿಷ್ಯನೂ ಮಗನೂ', 'ಒರುಕತ್ತು', 'ಅಚ್ಛನು
ಮಗಳುಂ', 'ಕೊಚ್ಚು ಸೀತ', 'ಮಗ್ದಲನ ಮರಿಯ'
'ಬಾಪ್ಪೂಜಿ'–ಇವೆಲ್ಲವೂ ಖಂಡಕಾವ್ಯಗಳೇ.

ಉಳ್ಳೂರರ 'ಪಿಂಗಳ', 'ಚಿತ್ರಶಾಲ', 'ಅಮೃತಧಾರ'
'ರತ್ನಮಾಲ', 'ಮಣಿಮಂಜೂಷ', 'ಕಿರಣಾವಲಿ' ಮುಂತ
ದುವು ಖಂಡಕಾವ್ಯಗಳ ಸಾಲಿನಲ್ಲಿ ನಿಲ್ಲುತ್ತವೆ.

ಮೇಲೆ ಹೇಳಿದ ಮಹಾಕವಿತ್ರಯರ ನಂತರ ಮಲಯಾ
ಸಾಹಿತ್ಯ ಕ್ಷೇತ್ರದಲ್ಲಿ ಖಂಡಕಾವ್ಯಗಳ ರಚನೆ ಮಂದಗತಿಯನ್ನು
ಹಿಡಿದಂತೆ ಕಂಡುಬರುತ್ತದೆ.

ಖಂಡಕಾವ್ಯಗಳ ರಚನೆಯಿಂದ ಕೇರಳದ ಮಹಾಕವಿ ಎನ್ನಿ
ಕೊಂಡ ಎನ್. ಕುಮಾರನಾಶಾನರ ಪರಿಚಯವನ್ನೂ ಖಂಡಕಾವ್
ಗಳ ಸಂಕ್ಷಿಪ್ತ ಪರಿಚಯವನ್ನೂ ಮುಂದೆ ನೋಡಬಹುದು.

## ಕವಿಪರಿಚಯ

ಕೇರಳದ ಚಿರಯಿನ್‌ಕೀಳ್ ತಾಲೂಕಿನಲ್ಲಿ ಕಡಯ್ಕಾವೂರ್ ಎನ್ನುವ ಗ್ರಾಮ. ಆ ಗ್ರಾಮದ ಕಾಯಿಕ್ಕರ ಎನ್ನುವ ಪ್ರದೇಶದ ತೊಮ್ಮನ್ ವಿಳಾಗತ್ತು ಕುಟುಂಬದಲ್ಲಿ ನಾರಾಯಣ ಮತ್ತು ಕಾಳಿ ಅಮ್ಮ ದಂಪತಿಗಳಿಗೆ ಒಟ್ಟು ಒಂಬತ್ತು ಮಕ್ಕಳು. ಆ ಮಕ್ಕಳಲ್ಲಿ ಎರಡನೆಯ ಮಗನಾಗಿ ಕ್ರಿ. ಶ. 1873 ಎಪ್ರಿಲ್ ತಿಂಗಳ ಹನ್ನೆರಡರಂದು ಕುಮಾರನಾಶನ್ ಜನಿಸಿದ್ದು. 'ಕುಮಾರು' ಎನ್ನುವುದು ಈ ಕವಿಯ ಬಾಲ್ಯದ ಹೆಸರು. 'ಕುಮಾರು' ಸಂಸ್ಕೃತವನ್ನು ಕಲಿತದ್ದು ಉಡೆಯಾನ್‌ಕುಳಿ ಕೊಚ್ಚು ರಾಮನ್ ವೈದ್ಯರಿಂದ. ಸಂಸ್ಕೃತಾಧ್ಯಯನದ ಕಾಲದಲ್ಲೇ ಊರಿಗೆ ಸಮೀಪದ ಸರ್ಕಾರಿ ಶಾಲೆಯೊಂದರಲ್ಲಿ ಉಪಾಧ್ಯಾಯರಾಗಿ ಕೆಲಸಕ್ಕೆ ಸೇರಿದರು. ಉಪಾಧ್ಯಾಯ ವೃತ್ತಿಗೆ ನಿಯಮಿತವಾದ ವಯಸ್ಸಾಗಿರಲಿಲ್ಲವಾದ್ದರಿಂದ ಆ ವೃತ್ತಿಯಿಂದ ಬಹುಬೇಗ ಹೊರಗೆ ಬರಬೇಕಾಯಿತು. ಅನಂತರ 'ಕುಮಾರು' ದಿನಸಿ ಅಂಗಡಿಯೊಂದರಲ್ಲಿ ಲೆಕ್ಕ ಬರೆದುಕೊಂಡಿದ್ದರು. ಈ ಮಧ್ಯೆ ಗೋವಿಂದ ನಾಶಾನರ ಸಂಸ್ಕೃತ ವಿದ್ಯಾಶಾಲೆಯನ್ನು ಸೇರಿದರು. ಅಲ್ಲಿ ಕಾವ್ಯ ನಾಟಕಾದಿಗಳನ್ನು ಅಭ್ಯಸಿಸಿ ಕವಿತಾರಚನೆಗೆ ತೊಡಗಿದರು. ಹದಿನಾರು ವಯಸ್ಸಿನ ಕುಮಾರುವಿನ ಮೇಲೆ ಅಂದಿನ ಕೇರಳ ಪ್ರವಾದಿ ನಾರಾಯಣ ಗುರುಗಳ ದೃಷ್ಟಿ ಬಿದ್ದಿತು. ಅಲ್ಲಿಂದ ಮುಂದೆ ಕುಮಾರುವಿನ ಜೀವನದ ದಿಕ್ಕು ಬದಲಿಸಿತು. ಮೈಸೂರು ಸರ್ಕಾರದ ಪ್ರಧಾನ ಅಧಿಕಾರಿಗಳಲ್ಲೊಬ್ಬರಾಗಿದ್ದ ಡಾ॥ ಪಲ್ಪು ಅವರ ಬಳಿಗೆ ಕುಮಾರುವನ್ನು ಕಳುಹಿಸಿಕೊಟ್ಟರು. ಕ್ರಿ.ಶ. 1896 ರಲ್ಲಿ ಸ್ಕಾಲರ್‌ಶಿಪ್ ಪಡೆದು ಬೆಂಗಳೂರಿನಲ್ಲಿ

ನ್ಯಾಯವಿದ್ವಾನ್ ಪರೀಕ್ಷೆಗೆ ವ್ಯಾಸಂಗವನ್ನಾರಂಭಿಸಿದರು. ಆ ಕಾಲದಲ್ಲಿ ಬೆಂಗಳೂರಿನಲ್ಲಿ ಪ್ಲೇಗ್ ಹರಡಿದ್ದುದರಿಂದ ಪರೀಕ್ಷೆ ಮುಗಿಯುವುದರೊಳಗೆ ಬೆಂಗಳೂರನ್ನು ಬಿಡಬೇಕಾಯಿತು. ಮುಂದಿನ ವಿದ್ಯಾಭ್ಯಾಸವನ್ನು ಮದರಾಸು ಮತ್ತು ಕಲ್ಕತ್ತದಲ್ಲಿ ಮುಂದುವರಿಸಬೇಕಾಯಿತು. ಕಲ್ಕತ್ತದಲ್ಲಿ ಮಹಾಮಹೋಪಾಧ್ಯಾಯ ಕಾಮಾಖ್ಯನಾಥ ತರ್ಕವಾಗೀಶ ಎನ್ನುವ ಪಂಡಿತರು ಗುರುಗಳಾಗಿ ದೊರಕಿದರು. ಆದರೆ ಕಲ್ಕತ್ತದಲ್ಲೂ ಪ್ಲೇಗ್ ಹರಡಿದ ಕಾರಣ ಪರೀಕ್ಷೆ ಮುಗಿಯುವುದಕ್ಕೆ ಮೊದಲೇ ಕೇರಳಕ್ಕೆ ಹಿಂದಿರುಗಬೇಕಾಯಿತು. ಕಲ್ಕತ್ತದಿಂದ ಹೊರಟ ಕುಮಾರು ಹುಟ್ಟಿದ ಊರಿಗೆ ಹೋಗದೆ, ನೇರವಾಗಿ ನಾರಾಯಣ ಗುರುಗಳ ಬಳಿಗೆ ಹೋದರು. ಅವರ ಸನ್ನಿಧಿಯಲ್ಲಿ ಉಳಿದು ಗುರುಗಳು ಕೈಗೊಂಡಿದ್ದ ಧರ್ಮಪ್ರಚಾರ ಕಾರ್ಯದಲ್ಲಿ ನೆರವಾದರು. ಗುರುಗಳ ಬೆನ್ನಲುಬಿನಂತೆ ನಿಂತ ಕುಮಾರು ಎಲ್ಲರ ದೃಷ್ಟಿಯಲ್ಲಿ 'ಚಿನ್ನಸ್ವಾಮಿ'ಯಾದರು.

ಜ್ಞಾನಾರ್ಜನೆಗಾಗಿ ಕೇರಳವನ್ನು ಬಿಟ್ಟು ಹೊರಗೆ ಹೋಗಿದ್ದ ಕುಮಾರು, ಕರ್ಮಯೋಗಿಯಾಗಿ ಕೇರಳಕ್ಕೆ ಹಿಂದಿರುಗಿ ಬಂದರು. ಶ್ರೀನಾರಾಯಣ ಗುರುಗಳು 'ಚಿನ್ನಸ್ವಾಮಿ'ಯನ್ನು ಕ್ರಿ. ಶ. 1904 ರಲ್ಲಿ ಶ್ರೀ ನಾರಾಯಣ ಧರ್ಮಪರಿಪಾಲನ ಸಭೆಯ ಕಾರ್ಯದರ್ಶಿಯನ್ನಾಗಿ ಆರಿಸಿದರು. ಸಭೆಯ ಆಶ್ರಯದಲ್ಲಿ ಪ್ರಕಟವಾಗುತ್ತಿದ್ದ 'ವಿವೇಕೋದಯಂ' ಪತ್ರಿಕೆಯ ಸಂಪಾದಕತ್ವವೂ ಚಿನ್ನಸ್ವಾಮಿಯ ಪಾಲಿಗೆ ಬಂದಿತು. ಕುಮಾರು, ಚಿನ್ನಸ್ವಾಮಿ ಈ ಹೆಸರುಗಳಿಂದ ಕರೆಯಿಸಿಕೊಳ್ಳುತ್ತಿದ್ದ ಕರ್ಮಯೋಗಿ, ಕವಿತಾ ರಚನೆಯ ಮೂಲಕ 'ಕುಮಾರನಾಶಾನ್' ಎಂದು ಕರೆಯಿಸಿಕೊಂಡರು. ಕುಮಾರನಾಶಾನರ ಬಹುಮುಖ

ಸೇವೆಯಿಂದಾಗಿ ಕ್ರಿ. ಶ. 1920 ರಲ್ಲಿ ಈಟುವ ಸಮಾಜದ ಪ್ರತಿನಿಧಿಯಾಗಿ ಕೇರಳ ವಿಧಾನ ಸಭೆಯ ಸದಸ್ಯರಾದರು. ನಲವತ್ತೈದನೆಯ ವಯಸ್ಸಿನಲ್ಲಿ ಕುಮಾರನಾಶಾನ್ ಹದಿನೇಳು ವರ್ಷದ ಭಾನುಮತಿ ಅಮ್ಮನನ್ನು ಮದುವೆಯಾಗಿ ದಾಂಪತ್ಯಜೀವನದಲ್ಲಿ ಕಾಲಿರಿಸಿದರು. ಈ ವೇಳೆಗೆ ಹತ್ತಾರು ಕಾವ್ಯ ರಚನೆಯಿಂದಾಗಿ ಕುಮಾರನಾಶಾನರ ಕೀರ್ತಿ ಎಲ್ಲೆಡೆಗೂ ವ್ಯಾಪಿಸಿತ್ತು. ಕ್ರಿ. ಶ. 1922 ರಲ್ಲಿ ಮದರಾಸಿನ ವಿಶ್ವವಿದ್ಯಾನಿಲಯದ ಸಭಾಂಗಣದಲ್ಲಿ ವೇಲ್ಸ್ ರಾಜಕುಮಾರರಿಂದ ಪಟ್ಟೆಶಾಲು ಮತ್ತು ಹೊನ್ನ ಕಡಗವನ್ನು ಪಡೆದು ಸನ್ಮಾನಿತರಾದರು.

ಕ್ರಿ. ಶ. 1924 ರ ಜನವರಿಯ ಒಂದು ಕೆಟ್ಟ ರಾತ್ರಿಯಲ್ಲಿ ಕೊಲ್ಲಂನಿಂದ ಆಲಪ್ಪುಳಕ್ಕೆ ಹೋಗುತ್ತಿದ್ದ ಕುಮಾರನಾಶಾನ್ ಬೋಟ್ ದುರಂತಕ್ಕೊಳಗಾದರು. ಇಬ್ಬರು ಪುತ್ರರು ಮತ್ತು ಪತ್ನಿಯನ್ನು ಬಿಟ್ಟು ತಮ್ಮ ಐವತ್ತೆರಡನೆಯ ವಯಸ್ಸಿನಲ್ಲಿ ಮಹಾಕವಿ ಕುಮಾರನಾಶಾನ್ ಇಹಲೋಕ ವ್ಯಾಪಾರವನ್ನು ಮುಗಿಸಿದ ಸ್ಥಳವನ್ನು ಇಂದು 'ಕುಮಾರಕೋಟಿ' ಎಂದು ಕರೆಯಲಾಗುತ್ತಿದೆ.

**ಮಲಯಾಳ ಸಾಹಿತ್ಯಕ್ಕೆ ಕುಮಾರನಾಶಾನರ ಕೊಡುಗೆ**

| | | | ಕ್ರಿ. ಶ. |
|---|---|---|---|
| 1. | ಸೌಂದರ್ಯಲಹರಿ (ಭಾಷಾಂತರ) | ... | 1901 |
| 2. | ಶಿವಸ್ತೋತ್ರಮಾಲ | ... | 1902 |
| 3. | ಮೇಘ ಸಂದೇಶ | ... | 1902 |
| 4. | ವಿಚಿತ್ರ ವಿಜಯಂ | ... | 1902 |

| | | | |
|---|---|---|---|
| 5. | ಪ್ರಬೋಧ ಚಂದ್ರೋದಯಂ | ... | 1902 |
| 6. | ವೀಣಪೂವು | ... | 1908 |
| 7. | ರಾಜಯೋಗಂ (ಪೂರ್ವಭಾಗ) | ... | 1911 |
| 8. | ನಳಿನಿ | ... | 1911 |
| 9. | ಲೀಲ | ... | 1914 |
| 10. | ಚಿಂತಾವಿಷ್ಟಯಾಯ ಸೀತ (ಪ್ರಾರಂಭ) | | 1914 |
| 11. | ಬುದ್ಧ ಚರಿತಂ (ಮೊದಲನೆಯ ಸರ್ಗ) | | 1915 |
| 12. | ದೈವಿಕ ಮಾಯಪ್ರತೀಕಾರಂ (ಭಾಷಾಂತರ) | | 1915 |
| 13. | ರಾಜಯೋಗಂ (ಸಂಪೂರ್ಣ) | ... | 1915 |
| 14. | ಬಾಲರಾಮಾಯಣಂ | ... | 1917 |
| 15. | ಬುದ್ಧ ಚರಿತಂ (ಕಾಂಡ 3-4) | ... | 1918 |
| 16. | ಕುಯಿಲ್ | ... | 1918 |
| 17. | ಪ್ರರೋದನಂ | ... | 1919 |
| 18. | ಸೀತಾ (ಪೂರ್ಣ) | ... | 1919 |
| 19. | ಪುಷ್ಪವಾಟಿ | ... | 1922 |
| 20. | ದುರವಸ್ಥ | ... | 1923 |
| 21. | ಚಂಡಾಲ ಭಿಕ್ಷುಕಿ | ... | 1923 |
| 22. | ಕರುಣ | ... | 1924 |
| 23. | ಬುದ್ಧ ಚರಿತಂ (ಭಾಗ 5) | ... | 1924 |

# ಆಶಾನರ ಕೃತಿಗಳು

---

**ವೀಣಪೂವು (ತೊಟ್ಟು ಕಳಚಿದ ಹೂವು)**

ಕುಮಾರನಾಶಾನರ ಎಲ್ಲ ಕಾವ್ಯಗಳ ನಡುವೆ ನಿಂತ ಪ್ರಧಾನ ಕಾವ್ಯ 'ವೀಣಪೂವು'. "ಆಶಾನರ ಘಟನಾವಳಿಗಳ ಬದುಕಿನಲ್ಲಿ ಬಹು ಮುಖ್ಯ ಘಟನೆ ಯಾವುದೆಂದು ಕೇಳಿದರೆ ವೀಣಪೂವಿನ ರಚನೆ...ಎಂದು ಎಳ್ಳಷ್ಟೂ ಸಂಶಯವಿಲ್ಲದೆ ಹೇಳುತ್ತೇನೆ. ಅದರಲ್ಲಿಯೂ ತುಂಬ ನಿರ್ಣಾಯಕವಾದ ನಿಮಿಷ ಯಾವುದೆಂದು ಕೇಳಿದರೆ 'ಹಾ ಪುಷ್ಪಮೇ' ಎನ್ನುವ ಎರಡು ಶಬ್ದಗಳು. ಅವರ ಲೇಖನಿಯ ಮೊನೆಯಿಂದ ಕಾಗದಕ್ಕಿಳಿದ ಸಂದರ್ಭ ಎಂದು ಹೇಳುವದಕ್ಕೂ ನಾನು ಹಿಂದುಳಿಯುವುದಿಲ್ಲ. 41 ಶ್ಲೋಕಗಳ ಈ ಖಂಡ ಕಾವ್ಯವನ್ನು ಆಶಾನರು ರಚಿಸಿದುದು ಕ್ರಿ. ಶ. 1908 ರಲ್ಲಿ. ಅದಕ್ಕೆ ಮೊದಲೂ ಅನೇಕ ಗ್ರಂಥಗಳನ್ನು ರಚಿಸಿದ್ದರು. ಅನಂತರವೂ ಎಷ್ಟೋ ಗ್ರಂಥಗಳನ್ನು ರಚಿಸಿದರು. ಆದರೆ 'ವೀಣಪೂವಿ'ನ ಸ್ಥಾನವನ್ನು ಮತ್ತೊಂದು ಪಡೆಯಲಾಗಿಲ್ಲ" ಎಂದು ಕೆ. ಎಂ. ಜಾರ್ಜ್ ಅಭಿಪ್ರಾಯಪಟ್ಟಿರುವುದರಲ್ಲಿ ಸಮಂಜಸತೆಯಿದೆ. ವೀಣಪೂವು ಕಾವ್ಯದ ರಚನೆಯವರೆಗಿನ ಆಶಾನರ ಕಾವ್ಯಗಳು ಸಂಸ್ಕೃತದಿಂದ ತರ್ಜುಮೆಗಳು ಮತ್ತು ಕವನ ಸಂಕಲನಗಳು. ಆಶಾನರು ಪಾಶ್ಚಾತ್ಯ ಸಾಹಿತ್ಯ ಸಂಪರ್ಕ-ದಿಂದ ಲಭಿಸಿದ 'ಎಲಿಜಿ' ಕಾವ್ಯಪ್ರಕಾರವನ್ನು ಅನುಕರಿಸಿ

‘ವಿಲಾಪಕಾವ್ಯ’ (ಶೋಕಗೀತಾತ್ಮಕ ಕಾವ್ಯ) ಗಳ ರಚನೆಗ
‘ವೀಣಪೂವು’ ನಾಂದಿಯಾದಂತಿದೆ. ‘ವೀಣಪೂವಿ’ನ ಅನಂತರ
ಆಶಾನರು ರಚಿಸಿದ ಎಲ್ಲ ಕಾವ್ಯಗಳನ್ನು ‘ಎಲಿಜಿ ಕಾವ್ಯ’ಗಳೆಂದು
ಕರೆಯಲಾಗದಿದ್ದರೂ ‘ಪ್ರರೋದನ’ ಕಾವ್ಯವಂತೂ ಎಲಿಜಿ
ಕಾವ್ಯವೇ. ಈ ಕಾವ್ಯದ ನಂತರ ಆಶಾನರ ಕಾವ್ಯರಚನೆ ಹೊಸ
ತಿರುವನ್ನು ಪಡೆಯಿತೆಂದು ಹೇಳಬಹುದು.

ಈ ಕಾವ್ಯವನ್ನು ರಚಿಸಿದ ಸಂದರ್ಭ : ಕಲ್ಲೀಕೋಟೆಯಲ್ಲಿ
ಒಂದು ಶಿವದೇವಾಲಯದ ಸ್ಥಾಪನೆಗೆ ನಾರಾಯಣ ಗುರುಗಳ
ಜೊತೆಯಲ್ಲಿ ಆಶಾನ್ ಹೊರಟಿದ್ದರು. ಎರ್ನಾಕುಲಂ ತಲಪು
ವಷ್ಟರಲ್ಲಿ ಗುರುವಿನ ಜೊತೆಯಲ್ಲಿದ್ದ ಮತ್ತೊಬ್ಬ ಶಿಷ್ಯ ಕಾಲರಾ
ವ್ಯಾಧಿಯಿಂದ ತೀರಿಕೊಂಡ. ಗುರುಗಳೂ ಕಾಲರಾ ವ್ಯಾಧಿ
ಗೊಳಗಾದರು. ರೋಗ ಉಲ್ಬಣಗೊಂಡಿತು. ಸಾವು ಬದುಕು
ಗಳ ಮಧ್ಯೆ ಗುರು ಇದ್ದ ಸಂದರ್ಭದಲ್ಲಿ ರಚಿಸಿದ 41 ಪದ್ಯಗಳ
ಖಂಡಕಾವ್ಯವೇ ‘ವೀಣಪೂವು’. ಕವಿ ತಾನು ಪ್ರೀತಿಸಿದ್ದ ಕನ್ಯೆ
ಯೊಬ್ಬಳನ್ನು ಕಳೆದುಕೊಂಡ ದುಃಖ ಈ ಕಾವ್ಯದಲ್ಲಿ ಪ್ರತಿಧ್ವನಿ
ಸಿದೆ ಎಂದು ಹೇಳುವವರೂ ಉಂಟು.

‘ಹಾ ಪುಷ್ಪಮೇ ಅಧಿಕ ತುಂಗ ಪದತ್ತಿಲೆತ್ರ
ಶೋಭಿಚ್ಚಿರುನ್ನಿದೊರು ರಾಜ್ಞಿಕಣಕ್ಕಯೇ ನೀ
ಶ್ರೀ ಭೂವಿಲಸ್ಥಿರ ಅಸಂಶಯಂ – ಇನ್ನು ನಿನ್ಟೆ
ಯಾಭೂತಿಯೆಙ್ಙು ಪುನರೆಙ್ಙು ಕಿಡಪ್ಪಿದೋರ್ತಾಲ್’
[‘ಹಾ ಸುಮವೆ ಎಷ್ಟೊಂದು ಎತ್ತರದಿ
ರಾಣಿಯಂದದಿ ನೀನು ಶೋಭಿಸಿದ್ದೆ !
ಜಗದೊಳ್ಸಿರಿಯಸ್ಥಿರವುದಿಟ. ಆ ನಿನ್ನ
ಸೌಭಾಗ್ಯವಿನ್ನೆಲ್ಲಿ ನೆಲೆ ನೆನೆಸಿಕೊಳಲು’]

ಎಂದು ಪ್ರಾರಂಭವಾಗುತ್ತದೆ ಕಾವ್ಯ.

ಹೂವನ್ನು ಕುರಿತು ಬರೆಯದ ಕವಿಗಳು ಯಾರೂ ಇರಲಾರರು. ಆದರೆ ಸಾಮಾನ್ಯವಾಗಿ ಕವಿಗಳೆಲ್ಲರ ದೃಷ್ಟಿ ಅರಳುವ, ಅರಳಿದ ಹೂವಿನ ಕಡೆಗೆ. ಆಶಾನರು ವೀಕ್ಷಿಸಿದುದು ಅರಳಿ ಕಂಪನ್ನು ಬೀರುವ ತನ್ನ ಸೌಂದರ್ಯದಿಂದ ತೆಕ್ಕನೆ ಮನಸೆಳೆಯುವ ಹೂವನ್ನಲ್ಲ. ಒಂದು ತೊಟ್ಟು ಕಳಚಿದ, ಚರಮಶಯ್ಯೆಯಲ್ಲಿದ್ದ ಹೂವನ್ನು.

ಹೂವಿನ ಚರಮಾವಸ್ಥೆಯನ್ನು ಕುರಿತು ಕಾವ್ಯವನ್ನು ಪ್ರಾರಂಭಿಸಿ ಅದರ ಯೌವನ, ಬಾಲ್ಯ, ಜನನ ಮುಂತಾದುವುಗಳ ಕಡೆಗೆ ದೃಷ್ಟಿ ಹಾಯಿಸಿ—ಮಾನವನ ಬದುಕನ್ನು ಹೂವಿನ ಬದುಕಿನಲ್ಲಿ ಪ್ರತಿಬಿಂಬಿಸಿ, ಬದುಕಿನ ವರ್ತಮಾನ ಕಾಲದಲ್ಲಿ ನಿಂತು ಭೂತಭವಿಷ್ಯತ್ತುಗಳ ದರ್ಶನವನ್ನು ನೀಡಿ ಕಡೆಗೆ ಎಲ್ಲವೂ ನಡೆಯುವುದು ಈಶ್ವರೇಚ್ಛೆಯಂತೆ ಎನ್ನುವಲ್ಲಿಗೆ ಕವಿ ಬಂದು ನಿಲ್ಲುವುದು.

'ಅಶಾಭರಂ ಶೃತಿಯಿಲ್ ವಯ್ಕುಗ ನಮ್ಮಳ್ ಪಿನ್ನೆ
ಈಶಾಜ್ಞ ಪೋಲೆ ವರುಮೊಕ್ಕೆಯು ಮೋರ್ಕಪೂವೇ'
['ನಂಬುಗೆಯನಿಡಬೇಕು ನಾವು ಶೃತಿಯೊಳು ಮತ್ತೆ
ದೈವಾಜ್ಞೆಯಂತೆ ನಡೆವುದೆಲ್ಲ ನೆನೆ ಸುಮವೇ']

"ಕಮನೀಯ ವಿಲಾಸವನ್ನು ಕ್ಷಣಕಾಲ ಎತ್ತಿಹಿಡಿದು ಸಮಸ್ತ ನೇತ್ರಗಳನ್ನೂ ಆಕರ್ಷಿಸುವ ಸಸ್ಯಲೋಕದ ಸುಖಸ್ವಪ್ನದ ಪ್ರತೀಕ ಹೂವು. ಕ್ಷಣಾರ್ಧದಲ್ಲಿ ಅಳಿದು ಹೋಗುವ ಸುಮ ಬಾಳ್ವೆಯಂತೆಯೇ ಮಾನವ ಜೀವನವೂ ಒಂದು ಕನಸು. ಕವಿ ಶೋಕಾಕುಲನಾಗುವುದು ಹೂವನ್ನು ಕುರಿತಾದರೂ ಹೂವು ಮಾನವನ ಬದುಕಿನ ಪ್ರತೀಕ ಅಷ್ಟೆ. ಹೂವಿನಂತೆ ಶೋಭಿಸು

ತ್ತಿದ್ದ ಮಾನವನ ಬಾಳು ಅಲ್ಪ ಕಾಲದ ಲೀಲೆಯನ್ನು ಮುಗಿಸಿ ಭೂಮಿಗೊರಗುವುದನ್ನು ಕಂಡು ಮರುಗಿ"* ಕುಮಾರನಾಶಾನರು ಈ ಕಾವ್ಯವನ್ನು ರಚಿಸಿರುವುದು.

## ನಳಿನಿ

ಇದೊಂದು ಪ್ರೇಮ ಕಾವ್ಯ. ಇದರ ಕಥಾವಸ್ತು ಕವಿಕಲ್ಪಿತ. ಈ ಕೃತಿಯ ಕಥಾನಾಯಕ ದಿವಾಕರ, ನಾಯಕಿ ನಳಿನಿ. ಇವರಿಬ್ಬರೂ ಬಾಲ್ಯದಿಂದ ಒಟ್ಟಿಗೆ ಆಡಿ ಬೆಳೆದವರು. ಯೌವನಕ್ಕೆ ಕಾಲಿರಿಸುವಷ್ಟರಲ್ಲಿ ಒಬ್ಬರನ್ನೊಬ್ಬರು ಅಗಲಿ ದೂರ ದೂರ ಬಾಳಬೇಕಾಗುತ್ತದೆ. ದಿನದಿಂದ ದಿನಕ್ಕೆ ದಿವಾಕರನ ಬದುಕು ಆಧ್ಯಾತ್ಮದ ಕಡೆಗೆ ತಿರುಗುತ್ತದೆ. ನಳಿನಿ ದಿವಾಕರನ ಅನುರಕ್ತೆ ಯಾಗಿಯೇ ಉಳಿಯುತ್ತಾಳೆ. ನಳಿನಿಯ ಪ್ರೇಮ ಯಾವ ವ್ಯತ್ಯಾಸವನ್ನೂ ಹೊಂದದೆ ಉಳಿಯುತ್ತದೆ. ದಿವಾಕರನ ಪ್ರೇಮ ಪ್ರಪಂಚದಷ್ಟು ವಿಸ್ತಾರಗೊಳ್ಳುತ್ತಾ ಹೋಗಿ ಲೋಕದ ಪ್ರತಿ ಯೊಂದು ಜೀವಿಯನ್ನೂ ಪ್ರೀತಿಸುವ ಯೋಗಿಯಾಗುತ್ತಾನೆ. ನಳಿನಿಯ ಪ್ರೇಮ ಪ್ರಪಂಚದಲ್ಲಿ ದಿವಾಕರ ಮಾತ್ರ. ದಿವಾಕರ ನನ್ನುಳಿದು ಬೇರೆ ಪ್ರಪಂಚವೇ ನಳಿನಿಗಿಲ್ಲ. ದಿವಾಕರ ಪ್ರೀತಿಸುವ ಸಕಲ ಜೀವರಾಶಿಯಲ್ಲಿ ನಳಿಯೂ ಒಬ್ಬಳು. ದ್ವಿಮುಖಿ ಪ್ರೇಮದ ಎರಡು ಧ್ರುವಗಳ ಸಂಕೇತ ದಿವಾಕರ ಮತ್ತು ನಳಿನಿ. ಊರು ಬಿಟ್ಟು ಹೊರಟು ಲೋಕ ಸಂಚಾರಿಯಾದ ದಿವಾಕರ ನನ್ನು ಅನ್ವೇಷಿಸಿ ನಳಿನಿ ಹೊರಡುತ್ತಾಳೆ.

---

* ಶೂರನಾಡ್ ಕುಂಜನ್ ಪಿಳ್ಳೆ: ಕುಮಾರನಾಶಾನರನ್ನು ಕುರಿತು– ಪುಟ 119

ಪ್ರೇಮ ಪಾಶದಲ್ಲಿ ಸಿಲುಕಿದ ಸ್ತ್ರೀಯೊಬ್ಬಳು ಪುರುಷನನ್ನು ಅನ್ವೇಷಿಸಿಕೊಂಡು ಹೊರಡುವ ಅಸಾಮಾನ್ಯ ಪ್ರಯತ್ನವನ್ನು ಆಶಾನರು ನಳಿನಿ ಪಾತ್ರದ ಮೂಲಕ ಅಭಿವ್ಯಕ್ತಗೊಳಿಸಿರುವುದು. ಅದನ್ನು ಕವಿ ಹೇಳುವುದು :

'ಹಾ ! ಹಸಿಕ್ಕರದು ಚೆಯ್ದು ಕೇವಲಂ
ಸಾಹಸಿಕ್ಯಮವಳೆನ್ನು ಸಾಧ್ವಿಯಾಳ್
ಗೇಹವುಂ ಸುಖವು ಮೊಕ್ಕೆವಿಟ್ಟುತನ್
ಸ್ನೇಹಮೋದಿಯದು ಚೆಯ್ದುದಾಣವಳ್'

"ಆ ಸಾಧ್ವಿಯನ್ನು ಕುರಿತು ಏನೋ ಸಾಹಸ ಮಾಡಿದಳು ಎಂದು ಪರಿಹಾಸ್ಯ ಮಾಡಬೇಡಿ. ಗೃಹವನ್ನೂ ಸುಖವನ್ನೂ ತ್ಯಜಿಸಿ ಹೊರಟವಳು. ಪ್ರೇಮ ನಡೆಸಿದಂತೆ, ನಡೆಸಿದ ಕಡೆಗೆ ಹೊರಟವಳು ಅಷ್ಟೆ."

ಪ್ರೇಮದ ನಿರ್ಬಂಧಕ್ಕೆ ಸಿಕ್ಕಿ ಹೊರಟಳು. ನಲ್ಲನನ್ನು ಹುಡುಕಿ ಹುಡುಕಿ ಕಾಣದಾದಾಗ ಅವಳಿಗೆ ಜೀವನದಲ್ಲಿ ಕತ್ತಲು ಕವಿದಂತಾಗುತ್ತದೆ. ಮನಸ್ಸು ಜೀವನವನ್ನು ಅಂತ್ಯಗೊಳಿಸಿ ಕೊಳ್ಳುವ ಪ್ರಯತ್ನಕ್ಕೆ ತೊಡಗುತ್ತದೆ. ಒಂದು ಸರಸ್ಸಿನಲ್ಲಿ ಮುಳುಗಿ ಮರೆಯಾಗಲು ಹೊರಟಾಗ, ಆಕಸ್ಮಿಕವಾಗಿ ಅಲ್ಲಿಗೆ ಬಂದ ಆಶ್ರಮದ ಯೋಗಿನಿ, ನಳಿನಿಯ ಆತ್ಮಹತ್ಯೆಯ ಪ್ರಯತ್ನ ವನ್ನು ತಡೆದು ಆಶ್ರಮಕ್ಕೆ ಕರೆದುಕೊಂಡು ಹೋಗುತ್ತಾಳೆ.

ಐದು ವರ್ಷಗಳು ಆಶ್ರಮದ ಜೀವನದಲ್ಲಿ ಸಂದು ಹೋಗು ತ್ತವೆ. ಸತ್ಸಂಗತ್ವದಿಂದ ನಿಸ್ಸಂಗತ್ವದ ಅನುಭವವನ್ನು ಪಡೆದ ನಳಿನಿಗೆ ಇದ್ದಕ್ಕಿದ್ದಂತೆ ಒಂದು ಪ್ರಭಾತ ಸಮಯದಲ್ಲಿ ದಿವಾಕರ ಆಶ್ರಮದ ಸಮೀಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಉದಯರವಿಯ

ತೇಜಸ್ಸೂ ಯೋಗಿಯ ಮುಖಮುದ್ರೆಯೂ ಉಳ್ಳ ದಿವಾಕರನನ್ನು ಕಂಡಾಗ ನಳಿನಿಗೆ ಅಷ್ಟು ವರ್ಷದ ತನ್ನ ಪ್ರೇಮ ಸಫಲವಾಯಿತು ಎನ್ನಿಸುತ್ತದೆ. ನಳಿನಿ ಓಡಿ ಹೋಗಿ ದಿವಾಕರನನ್ನು ಮಾತನಾಡಿಸಿ ಅವನ ಕಾಲಿಗೆ ನಮಸ್ಕರಿಸುತ್ತಾಳೆ. ದಿವಾಕರನಿಗೆ ನಳಿನಿಯನ್ನು ಕಂಡ ನೆನಪು ಕೂಡ ಉಳಿದಿರುವುದಿಲ್ಲ. ನಳಿನಿ ದಿವಾಕರನಿಗೆ ಶೈಶವಕಾಲದ ದಿನಗಳನ್ನು ನೆನಪು ಮಾಡಿ ಕೊಟ್ಟಾಗ :

"ಓ ! ನಳಿನಿ...! ನಳಿನಿ !...ಈಗ ನೆನಪಾಗುತ್ತಿದೆ. ತನ್ನ ಮನೆ...ಆ ಮನೆ...ಹೌದು...ಹೌದು...ನೆನಪಾಗುತ್ತಿದೆ. ಆದರೆ ಕೂಡಲೆ ಮರೆತೇ ಹೋಗುತ್ತದೆ. ಸೋದರೀ, ಸರಿಯಾಗಿ ನೆನಸಿ ಕೊಳ್ಳಲಾರದೆ ಸೋಲನ್ನನುಭವಿಸುತ್ತಿದ್ದೇನೆ" ಎನ್ನುತ್ತಾನೆ.

ದಿವಾಕರ ನಳಿನಿಯ ಹತ್ತಿರ "ನೀನು ನನ್ನನ್ನು ಏತಕ್ಕೋಸ್ಕರ ನೆನಪಿಟ್ಟುಕೊಂಡಿದ್ದೀಯೆ ? ನಾನು ನಿನಗೆ ಯಾವ ಉಪಕಾರ ಮಾಡಬೇಕು ಹೇಳು ? ವಿವೇಕಿಗಳಾದವರ ಧರ್ಮ ಉಪಕಾರ ಮಾಡುವುದು ತಾನೇ" ಎಂದು ಕೇಳಿದಾಗ ನಳಿನಿಗೆ ಏನು ಹೇಳಬೇಕು ಎನ್ನುವುದೇ ತೋರದಾಗುತ್ತದೆ. ಕಡೆಗೆ ಹೇಳುತ್ತಾಳೆ : "ಧರೆಯಿಲ್ ಭವಾನೊಟಿಞಾರು ಮಿಲ್ಲಿಮುಮಿವಳ್ಕ್ಕು ಕೇಳ್ಕ್ಕವಾನ್"

"ಈ ಪ್ರಪಂಚದಲ್ಲಿ ನಿನ್ನನ್ನುಳಿದು ನನಗೆ ಬೇರೆ ಯಾರೂ ಇಲ್ಲ" ಎಂದು ಮತ್ತೆ ಹೇಳುತ್ತಾಳೆ :

'ಲೋಲನಾರ್ಯನುರುವಿಟ್ಟು ಕೇಟ್ಟೊರಾ
ಬಾಲಪಾಠಮಖಿಲಂ ಮನೋಹರಂ
ಕಾಲಮಾಯಧಿಕಮಿನ್ನೊರಕ್ಷರಂ
ಪೋಲುಮಾಯದಿಲ್ ಮರಪ್ಪದಿಲ್ಲ ಞಾನ್'

'ಬಾಲ್ಯಕಾಲದಲ್ಲಿ ನೀನು ನನಗೆ ಹೇಳಿಕೊಟ್ಟ ಬಾಲಪಾಠಗಳು ಎಂತಹ ಮನೋಹರವಾದ ಪಾಠಗಳು ! ನೀನು ಹೇಳಿಕೊಟ್ಟು ಎಷ್ಟೋ ಕಾಲ ಕಳೆದಿದ್ದರೂ ನಾನು ಆ ಪಾಠಗಳ ಒಂದೇ ಒಂದು ಅಕ್ಷರವನ್ನೂ ಮರೆತಿಲ್ಲ".

'...ಮೆಚ್ಚಮಾಯ ಚೆರುಮಾಲ ಕೆಟ್ಟಿಯೆನ್
ಕೊಚ್ಚುವಾರ್ ಮುಡಿಯಿಲಜ್ಞಣಿಞ್ಞದುಂ'

"ಮಲ್ಲಿಗೆ ಹೂಗಳನ್ನು ನೀನೇ ಬಿಡಿಸಿತಂದು ಸುಂದರವಾದ ಸಣ್ಣ ಮಾಲೆಯನ್ನು ಕಟ್ಟಿ ನನ್ನ ಪುಟ್ಟ ಜಡೆಗೆ ಮುಡಿಸಿದುದು..."

ಇವೇ ಮುಂತಾದ ಬಾಲ್ಯಕಾಲದ ನೆನಪುಗಳನ್ನು ದಿವಾಕರನಿಗೆ ಮಾಡಿಕೊಡಲು ಹೊರಟ ನಳಿನಿ; ದಿವಾಕರ ಊರು ಬಿಟ್ಟು ಹೋದಮೇಲೆ ದಿವಾಕರನ ಚಿಂತೆಯಲ್ಲೇ ದಿನಗಳನ್ನು ನೂಕಿದುದು.....ಆತ್ಮಹತ್ಯೆಗೆ ಪ್ರಯತ್ನಿಸಿದ್ದು.....ಯೋಗಿನಿ ಅವಳನ್ನು ತಡೆದದ್ದು...ಐದು ವರ್ಷಗಳಕಾಲ ತಪಸ್ಸನ್ನಾಚರಿಸಿದ್ದು...ಇಂದು ತನ್ನ ಪ್ರೇಮದ ಸಾಹಸಯಾತ್ರೆಯಲ್ಲಿ ಸಾಫಲ್ಯ ಪಡೆದದ್ದು...ಹೀಗೆ ನಳಿನಿ ತನ್ನ ಬಾಳಿನ ಕಥೆಯನ್ನೆಲ್ಲ ದಿವಾಕರನಿಗೆ ಹೇಳಿಕೊಳ್ಳುತ್ತಾಳೆ: "ದಿವಾಕರ! ನನ್ನ ಇಷ್ಟು ವರ್ಷದ ತಪಸ್ಸು ಯೋಗಸಿದ್ಧಿಗಾಗಿಯಲ್ಲ; ಕಾಮನೆಯ ಸಿದ್ಧಿಗಾಗಿ" ಎಂದಾಗ ದಿವಾಕರನಿಗೆ ದಿಕ್ಕು ತೋಚದಂತಾಗುತ್ತದೆ. ಅವನು ಅಷ್ಟು ವರ್ಷಗಳು ಲೋಕ ಪರ್ಯಟನೆ ಮಾಡಿದುದು ಕಾಮನೆಯ ಸಿದ್ಧಿಗಾಗಿಯಲ್ಲ ; ಯೋಗಸಿದ್ಧಿಗಾಗಿ.

ದುಃಖಿತಳಾದ ನಳಿನಿಯನ್ನು ಬಿಟ್ಟು ದಿವಾಕರ ಪಲಾಯನ ಮಾಡುವ ಪ್ರಯತ್ನದಲ್ಲಿದ್ದುದನ್ನು ತಿಳಿದ ನಳಿನಿ ಪುನಃ ಅವನ ಕಾಲಿನ ಮೇಲೆ ಬಿದ್ದು ಗಟ್ಟಿಯಾಗಿ ಅಳುತ್ತಾ—

‘ಎನ್ಟೆಯೇಕ ಧನಮುಜ್ಜ್ವ ಜೀವನ–
ಜ್ಜಿನ್ಟೆ ಭೋಗಮದು ಮೆನ್ಟೆ ಮೋಕ್ಷವುಂ
ಎನ್ಟೆಯೀಶ, ದೃಢಮೀ ಪದಾಂಬುಜ–
ತ್ತಿನ್ಟೆಸೀಮ, ಇದು ಪೋಗಿಲಿಲ್ಲ ಞಾನ್’
[‘ನನ್ನೊಂದೆ ಧನ ನೀನೆ ಪ್ರಾಣವೂ ನೀನೆ
ನನ್ನ ಭೋಗವು ನೀನೆ ಮೋಕ್ಷವೂ ನೀನೆ
ನನ್ನ ಸರ್ವೇಶನೇ ನಿನ್ನ ಪದಕಮಲಗಳ
ಬಿಟ್ಟು ನಾನೆಲ್ಲಿಗೂ ಅಗಲಲಾರೆ.’]

ದಿವಾಕರ ನಿಂತಲ್ಲಿಯೇ ನಿಂತ, ಬಲೆಯಲ್ಲಿ ಸಿಕ್ಕಿದ ಪ್ರಾ ಯಂತೆ. ನಳಿನಿಯನ್ನು ಸ್ವೀಕರಿಸುವುದಂತೂ ಅವನಿಗೆ ಸಾಧ್ ವಿಲ್ಲ. ಅವನು ಅದಕ್ಕೆ ಸಿದ್ಧನಾಗಿಲ್ಲ. ಆದರೆ ನಳಿನಿ ಅವನನ್ನು ಬಿಡುತ್ತಿಲ್ಲ. ಆಗ ದಿವಾಕರನಿಗೆ ಉಳಿದದ್ದು ಒಂದೇ ಒಂದು ಮಾರ್ಗ. ನಳಿನಿಯ ಮನಸ್ಸನ್ನು ಅಲೌಕಿಕ ಪ್ರೇಮದ ಕಡೆಗ ಪರಿವರ್ತಿಸುವುದು. ಕಾಮನೆಯ ಸಿದ್ಧಿಯ ಹಾದಿಯನ್ನು ಬಿಡಿಸಿ ಯೋಗ ಸಿದ್ಧಿಯ ಕಡೆಗೆ ಕರೆತರುವುದು.

ದಿವಾಕರ ಹೇಳುತ್ತಾನೆ: "ನಳಿನಿ ಏತಕ್ಕೆ ಅಳುತ್ತಿರುವೆ ಪರಿಶುದ್ಧ ಪ್ರೇಮವನ್ನು ನಶ್ವರರಾದ ಮನುಷ್ಯರ ಮೇಲ ಪ್ರಯೋಗಿಸುವುದೇ ? ನಿನ್ನ ನಿರ್ಮಲ ಪ್ರೇಮವನ್ನು ಶಾಶ್ವತ ಸತ್ಯದ ಕಡೆಗೆ ಪ್ರಯೋಗಿಸು. ಅಲೌಕಿಕಾನುಭವಗಳನ್ನು ಪಡ ಯಲು ಸಿದ್ಧಳಾಗು."

ದಿವಾಕರನ ದಿವ್ಯವಾಣಿಯನ್ನು ಕೇಳುತ್ತಾ ಕೇಳುತ್ತಾ

‘ನೋಕ್ಕಿ ನಿನ್ನು ಹೃದಯಯಾಪನ್ನೆ ದಿ–
ವ್ಯೈಕ್ಯ ನಿವೃತಿ ಕರೋಜ್ಜ್ವಲಾನನಂ’

ಅವನ ದಿವ್ಯವದನವನ್ನೇ ನಿಟ್ಟಿಸುತ್ತಾ ನಿಂತಿದ್ದು ಕಡೆಗೆ ಅವನ ಹೃದಯಕ್ಕೊರಗಿದಳು.

'ಕನ್ಯೆ ಕೇವಲ ಸುಖಂ ಸಮಾಸ್ವದಿ –
ಚ್ಛನ್ಯ ದುರ್ಲಬ ಮಲೋಕ ಸಂಭವಂ'

"ಆ ಕನ್ಯೆ ಮತ್ತೆಲ್ಲಿಯೂ ದೊರಯುಲಾರದ ಕೈವಲ್ಯ ಸುಖವನ್ನನುಭವಿಸುತ್ತ ಮೋಕ್ಷವನ್ನು ಪಡೆದಳು".

ಮಗು ಮಲಗುವಾಗ ತಾಯಿಯನ್ನು ಹುಡುಕಿಕೊಂಡು ಬಂದು ತಾಯಿಯ ಎದೆಯನ್ನಪ್ಪಿ ಮಲಗಿದಂತೆ ನಳಿನಿ ತನ್ನನ್ನೊರಗಿ ಜೀವನಯಾತ್ರೆ ಪೂರೈಸಿದುದನ್ನು ಕಂಡು ದಿವಾಕರ ತಬ್ಬಿಬ್ಬಾಗುತ್ತಾನೆ.

ದಿವಾಕರ ಯೋಗಿಯಾಗಿದ್ದರೂ ತನ್ನನ್ನು ಅನ್ವೇಷಿಸಿಕೊಂಡೇ ಬಾಳಿದ ನಳಿನಿಯ ಪ್ರೇಮದ ಅಂತ್ಯ ಯಾತ್ರೆಯನ್ನು ಕಂಡಾಗ ಲೌಕಿಕ ಪ್ರಜ್ಞೆಗಿಳಿದು ಬರಬೇಕಾಗುತ್ತದೆ. ಸತ್ತವರಿಗಾಗಿ ದುಃಖಿಸುವ ಸಾಮಾನ್ಯ ಮನುಷ್ಯರಂತೆ ದಿವಾಕರನೂ ನಳಿನಿಯ ಸಾವಿಗಾಗಿ ದುಃಖಿಸುತ್ತಾನೆ. ಆದರೆ ಆ ದುಃಖವನ್ನು ಬಹುಬೇಗ ನಿಯಂತ್ರಿಸಿಕೊಂಡು "ನನ್ನ ಉಪದೇಶವೇ ಕಾರಣವಾಗಿ ನಳಿನಿ ಮೋಕ್ಷವನ್ನು ಸಂಪಾದಿಸಿದುದಾಗಿರಬಹುದು" ಎನ್ನುವ ವಿಶ್ವಾಸದಿಂದ ತನ್ನ ಮನಸ್ಸನ್ನು ಸಮಾಧಾನ ಪಡಿಸಿಕೊಳ್ಳುತ್ತಾನೆ.

ಆಕಾಂಕ್ಷೆಗಳನ್ನು ಅನುರಾಗದೊಂದಿಗೆ ಬೆಳೆಸುತ್ತಾ ಕಥೆಯನ್ನು ಪ್ರಾರಂಭಿಸಿ,ಅನುರಾಗವನ್ನು ಅಧ್ಯಾತ್ಮದ ಕಡೆಗೆ ನಡೆಸಿಕೊಂಡುಬಂದು ಉದ್ವೇಗ ಜನಕವಾದ ರೀತಿಯಲ್ಲಿ ಕಥೆಯನ್ನು ಅಂತ್ಯಗೊಳಿಸಿರುವ ಕುಮಾರನಾಶಾನರ 'ನಳಿನಿ' ಖಂಡಕಾವ್ಯವನ್ನು ಕುರಿತು "ಮಲಯಾಳ ಸಾಹಿತ್ಯ ಪ್ರಪಂಚದಲ್ಲಿ ನಳಿ

ನಿಯ ಆವಿರ್ಭಾವ ಒಂದು ಹೊಸ ಕವಿತಾ ಸರಣಿಯನ್ನು ಪ್ರಾರಂಭಿಸಿತು"* ಎಂದು ಮುಂತಾಗಿ ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ.

## ಲೀಲ

"ನಳಿನಿ" ಕಾವ್ಯವನ್ನು ಬರೆದು ಮುಗಿಸುವುದಕ್ಕೆ ಮೊದಲೇ ಆ ಮಾದರಿಯಲ್ಲಿ ಒಂದು ಚಿಕ್ಕ ಕಾವ್ಯವನ್ನು ಬರೆಯಬೇಕೆನ್ನುವ ಅಭಿಲಾಷೆಯುಂಟಾಗಿತ್ತು. ಅದಕ್ಕೆ ಕಾರಣ 'ನಳಿನಿ'ಯಲ್ಲಿ ನಾಯಕ ನಾಯಕಿಯರು ಬಹುಪಾಲು ರಾಜಸ ಗುಣಗಳನ್ನು ಬಿಟ್ಟು ಸಾತ್ವಿಕಾವಸ್ಥೆಯನ್ನು ತಲುಪಿದ ಪುಣ್ಯಜೀವಿಗಳು.ಅದಕ್ಕೆ ಮೊದಲಿನ ಅವಸ್ಥೆಯಲ್ಲವೇ ಜೀವಿ ತನ್ನ ವೇದನೆಗಳನ್ನೂ ಮಾನಸಿಕ ರಹಸ್ಯಗಳನ್ನು ಅಧಿಕವಾಗಿ ಅಡಗಿಸಿಕೊಂಡಿರುವುದು? ಆದುದರಿಂದ "ನಳಿನಿ"ಯ ಪಾತ್ರಗಳ ಹತ್ತಿರದ ಹಾಗೂ ಆ ಪಾತ್ರಗಳಿಂದ ಕೆಳಗಿನ ಮೆಟ್ಟಿಲಿನ ಪಾತ್ರಗಳನ್ನು 'ನಳಿನಿ'ಯ ರಚನೆಯ ನಂತರ ಸೃಷ್ಟಿಸಬೇಕೆನ್ನಿಸಿತ್ತು. ಈ ಮಧ್ಯೆ ಸೆಂಟ್ರಲ್ ಹಿಂದೂ ಕಾಲೇಜಿನ ಮ್ಯಾಗಜಿನ್‌ನಲ್ಲಿ ಬರಬೇಕು ; ಡಾ॥ ಕುಮಾರಸ್ವಾಮಿಯವರು ವಿಮರ್ಶೆಯೊಂದಿಗೆ ಪ್ರಕಟಿಸಿದ ಪರ್ಷಿಯನ್ ಕಥೆಯಲ್ಲಿ ಬರುವ ನಾಯಕಿಯ ಚಿತ್ರಣ, ಮೇಲೆ ಹೇಳಿದ ನನ್ನ ಸಂಕಲ್ಪವನ್ನು ಉದ್ದೀಪನಗೊಳಿಸಿತು......ಸಂಕ್ಷಿಪ್ತವಾಗಿ ಹೇಳುವುದಾದರೆ ಆ ಕಥೆಯಂತೆಯೇ ಈ ಕಥೆಯೂ ಇರುವುದು. ಆದುದರಿಂದ 'ಲೀಲ', 'ನಳಿನಿ'ಯಂತೆಯೇ ಒಂದು ಕಲ್ಪಿತ

---

* ಕೇರಳ ಪಾಣಿನಿ

ಕಥೆ"* ಎಂದು ಕವಿಯೇ ಈ ಕಾವ್ಯರಚನೆಯ ಸಂದರ್ಭ, ಕಥಾ ವಸ್ತುವಿನ ಆಯ್ಕೆ ಮುಂತಾದುವುಗಳನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ.

ಉತ್ತರ ಭಾರತದ ಉದಯಪುರದ ಹತ್ತಿರದಲ್ಲಿ ಐಶ್ವರ್ಯವಂತನಾದ ಒಬ್ಬ ವ್ಯಾಪಾರಿಯ ಮಗಳು ಲೀಲ. ಒಬ್ಬಳೇ ಮಗಳು, ಸದ್ಗುಣಶೀಲೆ. ಯುವತಿಯಾದ ಲೀಲಳನ್ನು ದೂರದ ಊರಿನ ಮತ್ತೊಬ್ಬ ವಣಿಗ್ವರನ ಮಗನೊಂದಿಗೆ ಅವಳ ತಂದೆ ವಿವಾಹ ಮಾಡಿಕೊಡುತ್ತಾನೆ.ಪತಿ ಗೃಹವನ್ನು ಸೇರಿದ 'ಲೀಲ'ಳ ಜೀವನದಲ್ಲಿ ಅಂಧಕಾರ ಕವಿಯುತ್ತದೆ. ಆದಕ್ಕೆ ಕಾರಣ: ಅವಳು ಬಾಲ್ಯದಿಂದಲೂ ಪ್ರೀತಿಸಿದ್ದ ಅವಳ ಗೆಳೆಯ ಮದನನಿಗೆ ಹೃದಯವನ್ನರ್ಪಿಸಿದ್ದು. ತನ್ನ ಗುಪ್ತಪ್ರೇಮದ ವಿಷಯವನ್ನು ತಂದೆಯ ಹತ್ತಿರ ಹೇಳಲು ಲೀಲಳಿಗೆ ಧೈರ್ಯ ಸಾಲದಾಗುತ್ತದೆ.

'ಗುರುಜನ ವಚನಂ ಕುಲಕ್ರಮಂ
ತರುಣಿಗಳ್ ತನ್ನುಡೆಯ ಸ್ವತಂತ್ರತ
ಕರುದಿಯಿವಮರಚ್ಚು ಕಾಮಿತಂ
ಕರುಮನ ಪೂಂಡಿವಳ್ ಕಾಟ್ಟಿ ಲೌಕಿಕಂ'

"ಗುರುಹಿರಿಯರ ವಚನವನ್ನೂ ಕುಲದ ಸಂಪ್ರದಾಯವನ್ನೂ ಸ್ತ್ರೀಯರಿಗಿರುವ ಅಸ್ವತಂತ್ರತೆಯನ್ನೂ ಪರಿಭಾವಿಸಿ ತನ್ನ ಮನದಿಚ್ಛೆಯನ್ನು ರಹಸ್ಯವಾಗಿರಿಸಿಕೊಂಡು ಮದುವೆಗೆ ಒಪ್ಪಿಕೊಂಡಳು."

---

* 'ಲೀಲ' ಮುನ್ನುಡಿ-ಕುಮಾರನಾಶಾನ್

ಪತಿಯ ಜೊತೆಯಲ್ಲಿ ಜೀವಿಸುತ್ತಿದ್ದಾಗಲೂ ಲೀಲಳಿಗ
ಮದನನದೇ ಚಿಂತೆ.

'ವರಸುಖ ವಿಭವಂಗಳ್ ಮೇಲ್ಕುಮೇಲ್
ವರ ನರುಳುನ್ನದವಳ್ಕು ದುಃಖಮಾಯ್'

"ಲೀಲಳ ಪತಿ ನೀಡುವ ಶ್ರೇಷ್ಠ ಸುಖವೈಭವಗಳು ಸುಖ
ವನ್ನು ತಾರದೆ ಅವಳಿಗೆ ದುಃಖವನ್ನುಂಟುಮಾಡಿದುವು." ಲೀಲ
ಪಕ್ಕದಲ್ಲಿ ಪತಿಯಿದ್ದರೂ ದೂರದ ಮದನನ ಚಿಂತೆಯಲ್ಲಿ ಕಷ್ಟ
ದಿಂದ ದಿನಗಳನ್ನು ನೂಕುತ್ತಿದ್ದಳು. ಅಷ್ಟರಲ್ಲಿ ವಿಧಿವಿಲಾಸವೋ
ಎನ್ನುವಂತೆ.

'ಅವಳುಡೆ ಶಯನೀಯ ಶಾಯಿಯಾ-
ಮವನೊರು ಪಸ್ಸಿಲುಣರ್ನ್ನಿಡಾದೆಯಾಯ್'

ಅವಳ ಪಕ್ಕದಲ್ಲಿ ಮಲಗಿದ್ದ ಪತಿ ಒಂದು ದಿನ ಬೆಳಗ್ಗೆ
ಮೇಲೇಳಲಿಲ್ಲ. ಲೀಲಳಿಗಿದ್ದ ಅಡಚಣೆ ಮಾಯವಾಯಿತು.

''ಮದನನರಿಗಿಲ್ ವಾಣರಮ್ಯಮಾ-
'ಉದಯಪುರಿ'ಕ್ಕು ಮಡಜ್ಞಿಯಾಯಳ್"

ಮದನನ ಜೊತೆಯಲ್ಲಿ ಬಾಳಿದ ರಮ್ಯವಾದ ಉದಯ
ಪುರಿಗೆ ಹಿಂದಿರುಗಿದಳು. ಆದರೆ ಊರಿನಲ್ಲಿ ಮದನನಿಲ್ಲ. ಲೀಲ
ಬೇರೊಬ್ಬನ ಮಡದಿಯಾಗಿ ಹೋದ ಬಳಿಕ ವಿರಕ್ತನಾಗಿ ಊರು
ಬಿಟ್ಟು ಹೊರಟುಹೋಗಿದ್ದ. ವಿಂಧ್ಯಪರ್ವತದ ತಪ್ಪಲಿನಲ್ಲಿ
ಅಲೆದಾಡಿಕೊಂಡಿದ್ದ. ಆ ವೇಳೆಗೆ ಲೀಲಳ ತಂದೆಯೂ ತೀರಿ
ಕೊಂಡಿದ್ದ. ಲೀಲ ತನ್ನ ಸಖಿಯೊಂದಿಗೆ ಮದನನನ್ನು ಹುಡುಕಿ
ಕೊಂಡು ಹೊರಟಳು. ಅವಳು ಹೇಳುತ್ತಾಳೆ:

'ಮರಣಂ ಭಯಸೀಮ ಯೆನ್ನಯೇ
ಕರುಮುಂ ಜೀವಗಳಜ್ಞಂ ನಾರತಂ
ವಿರಹಾರ್ತ್ತಯಿವಳ್ಕಹೋ! ಭಯಂ-
ಕರಮಾಯ್ ತೀರ್ನ್ನಧರಿಕ್ಕ ಜೀವಿತಂ'

"ಸಖೀ, ಸಾಮಾನ್ಯವಾಗಿ ಜೀವಿಗಳಿಗೆ ಮರಣ ಭಯಾನಕ ವಾದದ್ದು. ವಿರಹಾಕುಲೆಯಾದ ನನಗೆ ಬದುಕಿರುವುದೇ ಭಯಾನಕವಾಗಿದೆ."

ಮದನನನ್ನು ಒಮ್ಮೆ ಕಾಣುವುದೇ ನನ್ನ ಬದುಕಿನ ಗುರಿ. ಹೋಗೋಣ, ಎಲ್ಲೋ ಇರಲಿ, ಎಷ್ಟೋ ದೂರದಲ್ಲಿರಲಿ ಅವನನ್ನು ಕಾಣುವವರೆಗೆ ನನಗೆ ಬದುಕೇ ಹಿಂಸೆಯಾಗಿದೆ.

'ಕರುದುವದಿಹ ಚೆಯ್ಯವಯ್ಯ; ಚೆಯ್ಯಾನ್
ವರುದಿಲಭಿಚ್ಛದಿಲ್ ನಿನ್ನೀಡಾಂ ವಿಚಾರಂ
ಪರಮಹಿತಮರಿಞ್ಞುಕೂಡ ಯಾಯು :
ಸ್ಥಿರತಯುಮಿಲ್ಲತಿನಿಂದ್ಯಮೀ ನರತ್ವಂ'

"ಮನಸ್ಸು ಇಷ್ಟಪಡುವುದನ್ನು ಮಾಡಲು ಅನುಕೂಲವಿಲ್ಲ. ದೊರೆತದ್ದರಲ್ಲಿ ಮನಸ್ಸು ಇಷ್ಟಪಡುವುದಿಲ್ಲ. ಇನ್ನು ಸುಖ ಅಥವ ದುಃಖ ಅಥವ ಪರಮ ಕರ್ತವ್ಯಕ್ಕಾಗಿ ಜೀವಿಸೋಣ ವೆಂದರೆ ಅದೂ ಸರಿಯಾಗಿ ತಿಳಿಯದು. ತಿಳಿದು ಬದುಕಲು ಆಯುಷ್ಯ ಸ್ಥಿರವೂ ಅಲ್ಲ. ಎಂತಹ ದುಃಖದಿಂದ ಕೂಡಿದುದು ಜೀವನ"

ಎಂದು ಹೇಳುತ್ತಾ ಕಾಡು ಮೇಡುಗಳನ್ನು ಅಲೆದು ವಿಂಧ್ಯ ಪರ್ವತದ ತಪ್ಪಲಿಗೆ ಬಂದು 'ಇನಿಯಾ ಇನಿಯಾ ನೀನೆಲ್ಲಿರುವೆ' ಎಂದು ಹುಚ್ಚಿಯಂತೆ ಕೂಗಿಕೊಳ್ಳುತ್ತಾಳೆ.

'ವರಿಗ ಹೃದಯನಾಥ ವೈಗಿ ಕಾಣ್ಮೌನ್
ತಿರುವಡಿವಣೌಲಿಯಿಲ್‌ವಯ್ಕ್ಕುವಾನ್ ಮಹಾತ್ಮನ್
ತರಿಗ ಚಿರವಿಯುಕ್ತದರ್ಶನಂ ನೀ
ಕರುಣವಹಿಕ್ಕುಗ ದಾಸಿಞಾನ್ ದಯಾಲೋ'

"ಹೃದಯನಾಥ' ನೀನೆಲ್ಲಿರುವೆ? ನಿನ್ನನ್ನು ನೋಡಬೇಕು. ನಿನ್ನ ಪಾದಗಳಿಗೆ ನಮಸ್ಕರಿಸಬೇಕು. ಮಹಾತ್ಮಾ ದಯಾಳುವೇ ಈ ದಾಸಿಯನ್ನು ಕರುಣಿಸು. ದರ್ಶನವನ್ನು ನೀಡು."

ಎನ್ನುತ್ತ ಲೀಲ ಅಲೆದು ಅತ್ತು ಮೂರ್ಛೆಹೋಗುತ್ತಾಳೆ. ಅವಳು ಮೂರ್ಛೆ ತಿಳಿದೇಳುವ ಹೊತ್ತಿಗೆ ಆ ಮಾರ್ಗವಾಗಿ ಮದನ ಬರುತ್ತಾನೆ.

'..............................ನೊಕ್ಕಿ ನಿನ್ನಾನ್
ಅವಳೆಯತಿ ವಿರೂಪನಸ್ಥಿಶೇಷನ್
ಧ್ರುವ ಮಿಹ ಮಾಂಸ ನಿಬದ್ಧಮಲ್ಲರಾಗಂ'

ಅತಿವಿರೂಪಕ್ಕೊಳಗಾಗಿ ಅಸ್ಥಿಪಂಜರ ಮಾತ್ರವಾಗಿ ಉಳಿದಿದ್ದ ಮದನ ಅವಳನ್ನು ನೋಡುತ್ತಾ ನಿಂತುಕೊಂಡ, ಅನುರಾಗ ಕೇವಲ ಮಾಂಸ ನಿಬದ್ಧವಲ್ಲ ಎನ್ನುವುದು ಸತ್ಯ ಎಂದು ಸಾರುತ್ತಿದ್ದಂತೆ. ಲೀಲ ಅವನು ನಿಂತಿದ್ದ ಸ್ಥಳಕ್ಕೆ ಎದ್ದೋಡಿದಳು. ಅವನನ್ನು ಆಲಂಗಿಸಿಕೊಂಡಳು, ಚುಂಬಿಸಿದಳು. ಅವನ ತಲೆಯನ್ನು ನೇವರಿಸಿದಳು.

'ಕ್ಷಣಮವಳ್ ಸುಖಮೀಲಿತಾಕ್ಷಯಾಯ್'

ಒಂದು ಕ್ಷಣ ಅವಳು ಮದನನ ಆಲಿಂಗನ ಸುಖವನ್ನನುಭವಿಸಿದಳು ಅಷ್ಟೆ! ಅಷ್ಟರಲ್ಲಿ ಮದನನಿಗೆ ಯಾವುದೋ ಪ್ರಜ್ಞೆ ಮೂಡಿದಂತಾಗಿ ಅವಳ ತೋಳಸೆರೆಯಿಂದ ಬಿಡಿಸಿಕೊಂಡು ಕಾಡಿನಲ್ಲಿ ಮರೆಯಾದ. ಲೀಲಳೂ ಅವನ ಹಿಂದೆ ಓಡತೊಡಗಿದಳು.

ರೇವಾನದಿಯ ತೀರವನ್ನು ತಲುಪಿದ ಮದನ ನದಿಗೆ ಧುಮಿಕಿದ. ಆವನ ಹಿಂದೆ ಲೀಲಳೂ ಧುಮುಕುತ್ತಾಳೆ ಎನ್ನುವುದು ತಿಳಿಯದೆ !

## ಚಿಂತಾವಿಷ್ಟಯಾಯ ಸೀತ

ಆಶಾನರ ಸ್ತ್ರೀಪಾತ್ರಗಳೆಲ್ಲವೂ ವ್ಯಕ್ತಿ ಸ್ವಾತಂತ್ರ್ಯವನ್ನು ಹೊಂದಿದ ಪಾತ್ರಗಳು. "ಚಿಂತಾವಿಷ್ಟಯಾಯ ಸೀತ" (ಚಿಂತಾವಿಷ್ಟಳಾದ ಸೀತೆ) ಕಾವ್ಯದಲ್ಲಿ ಕಥಾನಾಯಕಿ ತನ್ನ ಲಹರಿಯನ್ನು ವ್ಯಕ್ತಗೊಳಿಸಿರುವುದು ಸ್ವಗತದ ಮೂಲಕ. ವ್ಯಕ್ತಿಸ್ವಾತಂತ್ರ್ಯದ ವಿಚಾರವನ್ನು ನಾಟಕೀಯವಾಗಿ ಆವಿಷ್ಕರಿಸುವುದರಲ್ಲಿ ಆಶಾನರು ವಿಜಯಿಗಳಾಗಿದ್ದಾರೆ ಎನ್ನಬಹುದು. ಆಶಾನರು ಚಿತ್ರಿಸಿರುವ ಸೀತೆ ಶೀಲವಂತೆ, ಜ್ಞಾನವತಿ, ಆರ್ಯಮಹಿಳೆ. ಸೀತೆ ವೇದಿಕೆಯ ಮೇಲೆ ಬಂದು ಸ್ವಗತವಾಗಿ ತನ್ನ ಮನೋವೇದನೆಯನ್ನು ತೋಡಿಕೊಳ್ಳುವ ಏಕಪಾತ್ರವನ್ನಾಗಿ ಕುಮಾರನಾಶಾನ್ ಚಿತ್ರಿಸಿರುವುದು.

ಕುಶಲವರೊಂದಿಗೆ ವಾಲ್ಮೀಕಿ ಮುನಿ ಅಯೋಧ್ಯೆಗೆ ಹೋಗಿದ್ದಾಗ ಆಶ್ರಮದಲ್ಲಿ ಒಂಟಿಯಾಗಿ ಉಳಿದ ಸೀತೆ, ಆಶ್ರಮದ ಹೂಬನದಲ್ಲಿ ಬಂದು ಕುಳಿತುಕೊಳ್ಳುತ್ತಾಳೆ. ಹಾಗೆ ಕುಳಿತ ಸೀತೆಯ ಮನಸ್ಸು ಅಯೋಧ್ಯೆಯ ಕಡೆಗೆ ಧಾವಿಸುತ್ತದೆ. ವಾಲ್ಮೀಕಿ ಮುನಿ ರಚಿಸಿದ ಕಾವ್ಯವನ್ನು ಕುಶಲವರಿಂದ ರಘುವರ ಕೇಳಿದಾಗ ಆತ ತಾನು ಸೀತೆಗೆ ಎಸಗಿದ ಅಪರಾಧವನ್ನು ಕುರಿತು ಮರುಗುವುದಿಲ್ಲವೇ ಎಂದು ನೆನಸಿಕೊಳ್ಳುತ್ತಾಳೆ. ಆಶಾನರು ಕಾವ್ಯವನ್ನು ಪ್ರಾರಂಭಿಸುವುದು ಸೀತೆಯ ಸ್ವಗತ ವಾಣಿಯಿಂದ.

ಆಶ್ರಮದ ಹೂಬನದ ಹಸಿರು ಹಾಸಿಗೆಯ ಮೇಲೆ ಕುಳಿತ ಸೀತೆ, ಪಶ್ಚಿಮದಲ್ಲಿ ಸೂರ್ಯ ಮರೆಯಾದದನ್ನಾಗಲೀ ಪೂರ್ವದಲ್ಲಿ ಚಂದ್ರ ಉದಿಸಿ ಮೇಲೇರಿ ಬಂದುದನ್ನಾಗಲೀ ಅರಿಯದಂತಹ ತಲ್ಲೀನತೆಯಲ್ಲಿ ಕುಳಿತಿರುತ್ತಾಳೆ. ಅವಳು ತನಗೆ ತಾನೇ ಹೇಳಿ ಕೊಳ್ಳುತ್ತಾಳೆ : "ರಾಮ ! ನನ್ನ ಹೃದಯಾಕಾಶವನ್ನು ನಿತ್ಯವೂ ಬೆಳಗಿದ್ದ ಚಂದ್ರಮ; ಈಗ ಸ್ಮೃತಿ ದರ್ಪಣದಲ್ಲಿ ಮಾತ್ರ ಹೊಳೆ ಯುವ ಚಂದ್ರ. ಇನಿಯನ ನೆನಹೇ ನನಗೆ ದುಃಖ ಸೇತು ವಾಯಿತು. ಮನಸ್ಸು ವ್ರತ ನಿಯಮಗಳಲ್ಲಿ ಪಳಗಿಹೋಯಿತು. ನಾನೀಗ ದುಃಖವನ್ನು ನುಂಗಿಕೊಳ್ಳಬಲ್ಲೆ. ಆದರೆ ನನಗಾದ ಅಪಮಾನವನ್ನು ಸಹಿಸಲು ನನ್ನ ಸ್ತ್ರೀತ್ವ ಸಿದ್ಧವಾಗಿಲ್ಲ. ನಾನು ಶರೀರ ತ್ಯಾಗ ಮಾಡದೆ ಉಳಿದೆ. ಮಕ್ಕಳ ಬಾಲ ಲೀಲೆಯನ್ನು ಕಂಡು ಆನಂದ ಪಟ್ಟೆ. ಮಕ್ಕಳು ಜೀವನದ ಕಾರಿರುಳಿನಲ್ಲಿ ತಾರೆ ಗಳಿದ್ದಂತೆ, ಕಡಲಿನಲ್ಲಿ ದ್ವೀಪವಿದ್ದಂತೆ. ನೊಂದ ಜೀವಿಗೆ ಸಾಂತ್ವನ ದೊರೆಯುವುದು ಮಕ್ಕಳಿಂದ. ಚಂದ್ರನಿಗೆ ಶುಕ್ಲ ಪಕ್ಷ ಕೃಷ್ಣ ಪಕ್ಷ ಗಳಿದ್ದಂತೆ, ಜೀವನವೂ ಶುಭಾಶುಭಗಳಿಂದ ಕೂಡಿದುದು. ಲಕ್ಷ್ಮಣ ಅರಸನ ಆಜ್ಞೆಯನ್ನು ನನಗೆ ತಿಳಿಸಿದುದು -ನನಗೆ ಸಿಡಿಲು ಬಡಿದಂತಾದದ್ದು -ಗರ್ಭಿಣಿಯಾಗಿದ್ದುದರಿಂದ ಆತ್ಮ ಹತ್ಯೆಗೆ ನಾನು ಮನಸ್ಸು ಮಾಡದೆ ಹೋದದ್ದು -ಇವೆಲ್ಲವೂ ನನ್ನ ಮನಸ್ಸನ್ನು ಪರಿಪಾಕಗೊಳಿಸುವುದಕ್ಕಾಗಿರಬೇಕು."

ಹೀಗೆ ಸೀತೆಯ ಗತಕಾಲದ ಕಹಿ ಅನುಭವದ ಕಥೆ ಸ್ವಗತ ವಾಗಿ ಮುಂದುವರಿಯುತ್ತದೆ. ಲಕ್ಷ್ಮಣನನ್ನು ನೆನಸಿಕೊಂಡು ಹೇಳುತ್ತಾಳೆ : "ಲಕ್ಷ್ಮಣ ! ವನವಾಸದಲ್ಲಿದ್ದಾಗ ನಾನು ಕಟು ನುಡಿಗಳನ್ನಾಡಿದೆ ಎಂದು ನನ್ನನ್ನು ಪರ್ಣಕುಟಿಯಲ್ಲಿ ಒಬ್ಬಂಟಿ ಗಳನ್ನಾಗಿ ಬಿಟ್ಟು ಹೋದೆ. ಆದರೆ ಈಗ ನನ್ನ ಯಾವ ಮಾತಿಗೆ

ಈ ಕಾಡಿನಲ್ಲಿ ಒಬ್ಬಳನ್ನೇ ಬಿಟ್ಟು ಹೋದೆ ?" ಎಂದು ಪ್ರಶ್ನಿಸುತ್ತಾಳೆ.

ಆಶಾನರ ಸೀತಾ ಪಾತ್ರದಲ್ಲಿ ಮನೋವಿಶ್ಲೇಷಣೆಯ ಸಹಜ ಸುಂದರ ಮಜಲುಗಳನ್ನು ಕಾಣುತ್ತೇವೆ. ಎಷ್ಟೇ ವಿವೇಕಿಯಾದರೂ ಮನುಷ್ಯ ಸಂಕಟಕ್ಕೆ ಸಿಕ್ಕಿದಾಗ ಅವನ ವಿವೇಕ ಹಿಂದೆ ಉಳಿಯುತ್ತದೆ. ಕ್ಲೇಶಕ್ಕೆ ಸಿಕ್ಕಿ ನಲುಗಿದ ಸೀತೆ ಒಬ್ಬ ಅಸಾಧಾರಣ ಸ್ತ್ರೀಯ ಸ್ಥಾನದಲ್ಲಿ ನಿಂತು ದಶರಥ, ರಾಮ, ಲಕ್ಷ್ಮಣ, ಅಯೋಧ್ಯೆಯ ಪ್ರಜೆಗಳು ಎಲ್ಲರನ್ನೂ ಒರೆಗಲ್ಲಿನಲ್ಲಿ ಉಜ್ಜಿ ಉಜ್ಜಿ ನೋಡುತ್ತಾಳೆ. ಕಡೆಗೆ ಆ ಅಪರಾಧ ಯಾರದೇ ಆಗಿರಲಿ, ಒಬ್ಬ ಆದರ್ಶ ಆರ್ಯ ಮಹಿಳೆಯಂತೆ ಹೆಣ್ಣಾಗಿ ಹುಟ್ಟಿ ತಾನು ಗೈದ ಹಿಂದಿನ ಜನ್ಮದ ಕರ್ಮಫಲ ಇದು ಎಂದು ಸಮಾಧಾನ ಹೊಂದಲು ಪ್ರಯತ್ನಿಸುತ್ತಾಳೆ.

ಯಾರೋ ಒಬ್ಬ ಸಾಮಾನ್ಯನ ಮಾತನ್ನು ಕೇಳಿ ಅದಕ್ಕೆ ರಾಜಧರ್ಮದ ಮುದ್ರೆಯೊತ್ತಿ ನಿಜಸ್ಥಿತಿ ತಿಳಿದಿದ್ದೂ ತುಂಬಿದ ಗರ್ಭಿಣಿಯಾದ ತನ್ನನ್ನು ಕಾಡಿಗಟ್ಟಿದ ಸಂದರ್ಭವನ್ನು ನೆನೆದಾಗ ಅವಳ ಮನಸ್ಸು ರೊಚ್ಚಿಗೇಳುತ್ತದೆ. ರಾಮನ ರಾಜಧರ್ಮ ಅವಳಿಗೆ ಅರ್ಥವಿಲ್ಲದ ಕಾರ್ಯದಂತೆ ತೋರುತ್ತದೆ. ಚಾಡಿ ಮಾತಿನಿಂದಾಗಿ ರಾಜ ಪ್ರತ್ಯಕ್ಷವಾಗಿ ಕಂಡದ್ದು ಕೂಡ ತಲೆಕೆಳಗಾಗುತ್ತದೆ. ಪ್ರೇಮದ ಆಳವನ್ನರಿತಿದ್ದರೂ ಮೃದು ಹೃದಯವನ್ನು ತಿಳಿದಿದ್ದರೂ ಮತಿಗೆಟ್ಟು ಚಾಡಿ ಮಾತನ್ನು ಕೇಳಿ ನೀಚ ಕಾರ್ಯಕ್ಕೂ ಕೂಡ ಹಿಂದೆಗೆಯುವುದಿಲ್ಲ ಈ ರಾಜರು ಎನ್ನಿಸುತ್ತದೆ ಸೀತೆಗೆ.

ಸಂದರ್ಭದ ಒತ್ತಡಕ್ಕೆ ಸಿಕ್ಕಿದಾಗ ರಘುವಂಶದ ಪೂರ್ವ ರಾಜರನ್ನೂ ಶ್ರೀರಾಮನನ್ನೂ ಕುರಿತು ನೆನಸಿಕೊಳ್ಳುತ್ತಾಳೆ. ಅವಳು

ಯೋಚಿಸುತ್ತಾಳೆ: "ತಾನು ಕಂಡದ್ದು ಎಂತೆಂತಹ ಘಟನೆಗಳನ್ನು! ಎಂತೆಂತಹ ರಾಜರನ್ನು! ತಲೆಗೆ ಕಿರೀಟದ ಆಸೆ ಹುಟ್ಟಿಸಿ ಅನಂತರ ಜಟೆ ಬೆಳಸಿಕೊಳ್ಳಲು ಕಾಡಿಗೆ ಕಳುಹಿಸಿದ ದಶರಥ ರಾಜ! ಓಹ್! ಆ ರಾಜನ ಮಗನಾದ ಶ್ರೀರಾಮ ಮಾಡಿದ ಮಹಾ ಪುಣ್ಯಕಾರ್ಯವೇನು ? ದಯಾಹೀನನಾಗಿ ಗರ್ಭಿಣಿ ಪತ್ನಿಯನ್ನು ದಟ್ಟಡವಿಗೆ ನೂಕಿದುದು ! ಕೀರ್ತಿವಂತರಾದ ರಾಜರೇ ಇಂತಹ ದುರಾಚಾರಕ್ಕಿಳಿದರೆ, ಧರ್ಮನಾಶವನ್ನುಂಟುಮಾಡಿದರೆ, ಸಜ್ಜನರು ಭೂಮಿಯಲ್ಲಿ ಬದುಕುವುದಾದರೂ ಹೇಗೆ ? ಅಂದು ಲಂಕಾಪುರಿಯಲ್ಲಿ ರಾಘವ ತನ್ನ ವಿಷಯವಾಗಿ ವಿರಕ್ತಿಯನ್ನು ತಾಳಿದ್ದೇನೋ ಸರಿ! ಆದರೆ ಆಗಲೇ ತನ್ನನ್ನು ದೂರಮಾಡಿದ್ದರೆ ಚೆನ್ನಾಗಿರುತ್ತಿತ್ತು. ಅದು ಬಿಟ್ಟು ಈಗೇಕೆ ಎಲ್ಲರೆದುರಿಗೆ ಕೆಸರಿನಲ್ಲಿ ಕಾಲನ್ನದ್ದಿ ತೊಳೆದುಕೊಳ್ಳುತ್ತಿದ್ದಾನೆ ಶ್ರೀರಾಮ! ಪುರುಷ ಜಾತಿಯ ಇಂತಹ ನಡವಳಿಕೆಯಿಂದ ಸ್ತ್ರೀ ತನ್ನ ಜನ್ಮವನ್ನು ಪಾಪಿ ಜನ್ಮವೆಂದು ಹಳಿದುಕೊಳ್ಳುವಂತಾಗುತ್ತಾಳೆ.

ಸೀತೆಯ ನೆನಪು ಮತ್ತೂ ಹಿಂದಕ್ಕೆ ಹೋಗುತ್ತದೆ. ತನ್ನ ವಿವಾಹವನ್ನು ಕುರಿತು ನೆನಸಿಕೊಳ್ಳುತ್ತಾಳೆ. ಶೂರನಾದ ರಾಮನ ಕೈ ಹಿಡಿದ ಆ ಸ್ವಯಂವರ ಮಂಟಪ—ಅನಂತರ ನಡೆದ ವಿಧಿಪೂರ್ವಕ ವಿವಾಹ—ಆ ಮುಹೂರ್ತದಲ್ಲಿ ನುಡಿದ ಪವಿತ್ರ ಮಂತ್ರಗಳು—ಇವೆಲ್ಲವುಗಳಲ್ಲೂ ಸಹ ಭಾಗಿನಿಯಾದ ಧರ್ಮಪತ್ನಿಯ ಅವಸ್ಥೆ ಈಗೇನಾಗಿ ಹೋಗಿದೆ ? ಪಾವನ ವಿವಾಹದಿಂದ ಇಂಥ ಅಧಃಪತನವೆ ?

ತಾನು ದೀರ್ಘಕಾಲ ಕಾಡಿನಲ್ಲಿ ವಾಸಮಾಡಬೇಕಾಗಿಬಂದಿತು. ಅಷ್ಟೇ ಅಲ್ಲ; ತನ್ನ ಬವಣೆ ಅಲ್ಲಿಗೇ ಮುಗಿಯಲಿಲ್ಲ. ಒಂದರ ಹಿಂದೆ ಮತ್ತೊಂದು. ಇವೆಲ್ಲ ಏಕೆ ನಡೆಯಿತು ಎನ್ನುವುದೇ

ತಿಳಿಯದು. ಎಷ್ಟು ಯೋಚಿಸಿದರೂ ತಾನು ಮಾಡಿದ ತಪ್ಪು ಯಾವುದೂ ಹೊಳೆಯುತ್ತಿಲ್ಲ.

'ನೆಡುನಾಳ್ ವಿಪಿನತ್ತಿಲ್ ವಾಳುವಾ
ನಿಡಯಾಯ್ ಇಜ್ಜಳದೆನ್ತ್ ಕುಟ್ಟವೋ
ಪಟುರಾಕ್ಷಸ ಚಕ್ರವರ್ತಿಯೆ
ನ್ನುಡಲ್ ಮೋಹಿಚ್ಚದು ಞಾನ್ ಪಿಳಚ್ಚದೋ'
[ಬಹುಕಾಲ ಕಾನನದಿ ಕಾರ್ಪಣ್ಯದಿಂದ
ಜೀವಿಸಲು ನಾನು ಗೈದ ತಪ್ಪೇನು?
ದುರುಳ ರಕ್ಕಸರಾಜ ರಾವಣನು ಎನ್ನ
ಬಯಸಿದರೆ ನಾನು ಗೈದ ತಪ್ಪೇನು?]

ರಾಜನಾದವನು ತನ್ನ ಕರ್ತವ್ಯವನ್ನು ನೆರವೇರಿಸುವಾಗ ಪ್ರಜೆಗಳ ಅಭಿಪ್ರಾಯವನ್ನೂ ನೆರವೇರಿಸಬೇಕಾಗುತ್ತದೆ ನಿಜ. ಆದರೆ ಸೀತೆಗೆ 'ಜನಾಭಿಪ್ರಾಯ', 'ಜನಾಪವಾದ' ಶಬ್ದಗಳು ಅರ್ಥಶೂನ್ಯ ಶಬ್ದಗಳೆನ್ನಿಸುತ್ತವೆ. ಅದಕ್ಕೆ ಪಾಪರಹಿತಳಾದ ತಾನೇ ಸಾಕ್ಷಿ ಎಂದುಕೊಳ್ಳುತ್ತಾಳೆ.

ಅಂದು ರಘುವರನ ಕೈವಶವಾಗಬೇಕಾಗಿದ್ದ ರಾಜ್ಯಲಕ್ಷ್ಮಿಯನ್ನು ಭರತನ ಮಾತೆ ಕಸಿದುಕೊಂಡಳು. ರಾಮ ಏನನ್ನೂ ಮಾತನಾಡದೆ ಕಾಡನ್ನು ಸೇರಿದ. ಇಂದು ಜನರ ಅಭಿಪ್ರಾಯಕ್ಕೆ ಮನ್ನಣೆಯಿತ್ತು ಗರ್ಭಿಣಿಯಾದ ಪತ್ನಿಯನ್ನು ಕಾಡಿಗಟ್ಟಿದ. ಜನಾಭಿಪ್ರಾಯಕ್ಕೆ ಈ ರಾಜ ಅಂದೇಕೆ ಕಿವಿಗೊಡಲಿಲ್ಲ? ಆಗ ಅದೇ ಸತ್ಯಪರಾಯಣತೆ ಎನ್ನಿಸಿರಬೇಕು. ಈಗ ಇದೇ ಧರ್ಮಪರಾಯಣತೆ ಎನ್ನಿಸಿರಬೇಕು. ಚತುರರ ಚಪಲತೆಯನ್ನು ಜನರು ಗುಣವೆಂದೇ ಭಾವಿಸುತ್ತಾರೆ. ಹಿಂದೆ ಜನರು ತನ್ನನ್ನು

ಕೊಂಡಾಡಿ ಹಾಡಿದರು. ಶ್ರೇಷ್ಠಳಾದ ಪಟ್ಟ ಮಹಿಷಿ ಎಂದು ಹೊಗಳಿದರು. ಆದರೆ ಮತ್ತೆ ಏತಕ್ಕೆ ರಘುಕುಲದ ಕುಡಿಯನ್ನು ಗರ್ಭದಲ್ಲಿ ಧರಿಸಿದ್ದರೂ ಜನರಿಂದ ನಿಂದ್ಯಳಾದೆ ಎನ್ನುವುದು ಬಗೆಹರಿಯದೆ ಇದಿಯಲ್ಲ ಎಂದು ಸೀತೆ ಚಿಂತಾವಿಷ್ಟಳಾಗುತ್ತಾಳೆ.

'ಪತಿಯಾಂ ಪರದೇವತಯ್ಕ್ಕುಪೋ
ಮತಿಯರ್ಪಿಚ್ಚೊರು ಭಕ್ತಯಲ್ಲಿ ಞಾನ್
ಚದಿಯೋರ್ಕಿಲು ಮೆನ್ನೊಡೋದಿಯಾಲ್
ಕ್ಷತಿಯೆಂದಜ್ಞನೆ ಚೆಯ್ವುವೋ ನೃಪನ್'

ಪತಿ ಎನ್ನುವ ಪರದೈವಕ್ಕೆ ಹೃದಯವನ್ನರ್ಪಿಸಿದ ಪತಿಭಕ್ತಳಲ್ಲವೇ ನಾನು? ನಾನು ಮಾಡಿದ ತಪ್ಪಾದರೂ ಏನು? ನಾನೆಂದಾದರೂ ಪತಿಗೆ ವಂಚನೆಯನ್ನೆಣಿಸಿದೆನೆ? ಈ ನೃಪತಿ ನನಗೇಕೆ ಹೀಗೆ ಮಾಡಿದ?

ಹೀಗೆಯೇ ಸೀತೆಯ ಚಿಂತೆ ಮುಂದುವರಿಯುತ್ತದೆ. ಮಾನವಳಾಗಿ ಜನಿಸಿದ ಆ ಮಹಾಮಾತೆ ಈ ಲೋಕದಲ್ಲಿ ಕಂಡು ಅನುಭವಿಸಿದುದೇನು? ಗಿರಿಗಹ್ವರಗಳು, ವಿಪಿನಗಳು, ಸಿಂಹ ಶಾರ್ದೂಲ ಮುಂತಾದ ಪ್ರಾಣಿಗಳು, ಸಾಗರ, ಕ್ರೂರ ರಾಕ್ಷಸರು — ಎಲ್ಲವನ್ನೂ ಕಂಡದ್ದಾಯಿತು. ನರಲೋಕದ ನರಕವನ್ನೂ ದುಃಖವನ್ನೂ ಅನುಭವಿಸಿದ್ದಾಯಿತು. ಇಷ್ಟಾದರೂ ಜಾನಕಿ ಎಂದೂ ಪತಿಯ ಮನಸ್ಸಿಗೆ ವಿರುದ್ಧವಾಗಿ ನಡೆದವಳಲ್ಲ. ಇರುವ ವಿಷಯವನ್ನು ರಾಮ ಅವಳಿಗೆ ತಿಳಿಸಿದ್ದರೆ ಅವಳು ತಾನಾಗಿ ಅಲ್ಲಿಂದ ದೂರ ಸರಿಯುತ್ತಿದ್ದಳೋ ಏನೋ? ಆದರೆ ಯಾರ ನಾಮಸ್ಮರಣೆಯೇ ಅವಳ ಜೀವನದ ಆಧಾರ ಎಂದು

ಭಾವಿಸಿದ್ದಳೋ ಯಾವ ಪತಿಯನ್ನು ಅವನ ನೆರಳಿನಂತೆ ಹಿಂಬಾಲಿಸಿ ತನ್ನತನವನ್ನೇ ಶೂನ್ಯಗೈದಿದ್ದಳೋ ಅಂತಹ ಪತಿ ಅವಳ ವಿಷಯದಲ್ಲಿ ನಡೆದುಕೊಂಡದ್ದು ಹೇಗೆ? ಸೀತೆಗೆ ಅತೀವ ಯಾತನೆಯನ್ನು ಉಂಟುಮಾಡಿದುದು ಅದು. ಗರ್ಭಿಣಿಯ ಬಯಕೆಯೊಂದನ್ನು ಪ್ರೀತಿಯಿಂದ ಹೇಳಿಕೊಂಡಾಗ ಅದನ್ನೇ ಬಲವಾಗಿ ಹಿಡಿದು ರಾಘವ ವಂಚನೆಗೈದಿದ್ದ. ಅದನ್ನು ನೆನಸಿ ಕೊಂಡಷ್ಟು ಅವಳ ಚಿಂತೆ ಹೃದಯದ ಆಳಕ್ಕೆ ಇಳಿಯುತ್ತಾ ಹೋಗುತ್ತದೆ. ಓ! ಎಷ್ಟು ಅಂತರ! ರಾಮ ವನವಾಸ ಕೈಗೊಂಡಾಗ ಅವನನ್ನು ಬಿಟ್ಟಿರಲಾರದೆ ತಾನೇ ಅವನು ಬೇಡ ವೆಂದರೂ ಅವನ ಜೊತೆಯಲ್ಲಿ ಹೋದಳು. ಆದರೆ ರಾಮ ಮಾಡಿದ್ದೇನು? ತಾನೇ ಆಜ್ಞೆಯಿತ್ತು ಅವಳನ್ನು ಒಂಟಿಯಾಗಿ ಕಾಡಿಗೆ ಅಟ್ಟಿದ. ಒಂದು ಕಟ್ಟಿರುವೆ ಕೂಡ ತನ್ನ ಮೊಟ್ಟೆ ಗಳನ್ನು ಪ್ರೀತಿಯಿಂದ ಕಾಪಾಡುತ್ತದೆ. ಎಲ್ಲವನ್ನೂ ತಿಳಿದ ಅವಳ ಅರಸ ತನ್ನ ವಂಶದ ಕುಡಿಯನ್ನು ಹೊತ್ತ ಅವಳನ್ನು ಕಾಡಿಗೆ ಕಳುಹಿಸಿದ.

ರಾಮನ ಜನನದ ಕಥೆಯನ್ನು ಸೀತೆ ನೆನಸಿಕೊಳ್ಳುತ್ತಾಳೆ. ದಶರಥ ಮಹಾರಾಜ ಮಕ್ಕಳನ್ನು ಪಡೆಯುವುದಕ್ಕಾಗಿ ಯಾಗ ಮಾಡಿದ. ಅದೇ ದಶರಥನ ಮಗ ಪಿಸುಣರ ಮಾತನ್ನು ಕೇಳಿ ತನ್ನ ಮಕ್ಕಳನ್ನು ಗರ್ಭದಲ್ಲಿ ಹೊತ್ತ ತಾಯಿಯನ್ನು ಕಾಡಿಗಟ್ಟಿದ. ರಾಜನ ಧರ್ಮ ಬುದ್ಧಿ ತನ್ನ ಸಹಧರ್ಮಿಣಿಯ ವಿಷಯದಲ್ಲಿ ಮರೆಯಾಯಿತು. ಅದೆಲ್ಲವೂ ತನ್ನ ದುರ್ವಿಧಿ ಎಂದುಕೊಳ್ಳುತ್ತಾಳೆ. ಆ ಕಥೆಯೆಲ್ಲವನ್ನೂ ಇನ್ನು ನೆನಸಿ ಕೊಳ್ಳುವುದು ಬೇಡವೆಂದು ಎಷ್ಟು ಮನಸ್ಸು ಮಾಡಿದರೂ ಗತಿಸಿದ ಸಿಹಿ ಕಹಿ ನೆನಪುಗಳೆಲ್ಲವೂ ಅವಳನ್ನು ಕಾಡುತ್ತವೆ.

ಹಿಂದೆ ರಾಮನ ಮನಸ್ಸು ಎಷ್ಟು ಕೋಮಲವಾಗಿತ್ತು ! ಕಾಡಿನಲ್ಲಿ ಸೀತೆ ಸಾಕಿದ್ದ ಜಿಂಕೆಯೊಂದು ಗರ್ಭಭಾರದಿಂದ ಆಶ್ರಮದ ಮುಂದೆ ನಿಂತಿದ್ದಾಗ ಅದನ್ನು ಕಂಡು ಅವನ ಕಣ್ಣಿನಲ್ಲಿ ನೀರಾಡಿತ್ತು. ಆದರೆ ರಾಜನ ಪದವಿ ದೊರಕಿದ ನಂತರ ಅವನ ಮನಸ್ಸು ಗುರಾಣಿಯ ಹೊರಮೈಯಂತೆ ರೂಕ್ಷವಾಯಿತು.

ತಾನು ಕಾಡಿನಲ್ಲಿ ಇದ್ದ ದಿನಗಳನ್ನು ಮೈಥಿಲಿ ನೆನೆಯುತ್ತಾಳೆ. ಆ ದಿನಗಳೇ ತನ್ನ ಜೀವನದ ಸುಖವಾದ ದಿನಗಳು ಎನ್ನಿಸುತ್ತದೆ. ಆಗ ತನ್ನ ಪ್ರಿಯನಿಂದ ಸುಖ ಸಂತೋಷಗಳನ್ನು ಪಡೆದಿದ್ದಳು. ರಾಜನಾದ ಮೇಲೆ ಆ ಪ್ರೀತಿ ಏನಾಯಿತು ? ದೇಹ ಮನಸ್ಸುಗಳೆರಡೂ ಒಂದೇ ಆಗಿ ಅವರು ಆ ನಿರ್ಜನ ಪ್ರದೇಶದಲ್ಲಿ ಅನುಭವಿಸಿದ ಸುಖವೋ ಊಹಾತೀತ. ಕೊಳಗಳಲ್ಲಿ ಮಿಂದದ್ದು – ತನಗಾಗಿ ರಾಮ ಕಮಲಗಳನ್ನು ಕಿತ್ತು ತಂದು ತನ್ನ ಮನಸ್ಸನ್ನು ಸಂತೋಷಪಡಿಸುತ್ತಿದ್ದದ್ದು — ಮರುಭೂಮಿಯನ್ನು ಮೋಹನ ಪುಷ್ಪವಾಟಿಯನ್ನಾಗಿ ಪರಿವರ್ತಿಸಿದ ಆ ಪ್ರೇಮ—ಅದನ್ನು ಮರೆಯುವುದಾದರೂ ಹೇಗೆ? ಆದರೆ ಆ ಪ್ರೇಮದ ನಂದಾದೀಪವೂ ನಂದಿಹೋಗುವ ಅನುಭವ ತನಗಾಗುತ್ತಿದೆಯಲ್ಲ! ಎನ್ನಿಸುತ್ತದೆ ಸೀತೆಗೆ.

ಮನುಷ್ಯನನ್ನು ವೈಭವ, ಉನ್ನತಿ, ವಿಖ್ಯಾತಿ, ಗೆಲುವು– ಇವೆಲ್ಲವೂ ದುರಹಂಕಾರಿಯನ್ನಾಗಿ ಮಾಡುತ್ತವೆ. ದುರಭಿಮಾನದ ಗಾಳಿ ಬೀಸಿದಾಗ ಆ ಪ್ರೇಮಜ್ಯೋತಿ ನಂದಿಹೋಗಲೂ ಬಹುದು. ಸೀತೆಗೆ ಅನ್ನಿಸುತ್ತದೆ :

‘ ನಿಹಿತಾರಿಗಳ್ ಭೂಭರಿಕ್ಕುವಾನ್
ಸಹಜನ್ಮಾರ್ ನೃಪನಿಲ್ಲಿಯೋಗ್ಯರಾರ್ ?
ಸಹಧರ್ಮಿಣಿಯೊತ್ತು ಪಾಳುವಾನ್
ಗಹನತ್ತಿಲ್ ಸ್ಥಲಮಿಲ್ಲಿ ವೇಂಡಪೋಲ್ ’ 130

"ಶತ್ರುಗಳನ್ನು ಜಯಿಸುತ್ತ ಭೂಮಿಯನ್ನಾಳಿಕೊಂಡಿರುವು ದಕ್ಕೆ ಶಕ್ತರಾದ ಸಹೋದರರು ರಾಮನಿಗಿರಲಿಲ್ಲವೆ? ಸಹ ಧರ್ಮಿಣಿಯು ಜೊತೆಯಲ್ಲಿ ಸುಖವಾಗಿ ಬಾಳುವುದಕ್ಕೆ ವಿಸ್ತಾರ ವಾದ ವಿಪಿನದಲ್ಲಿ ರಾಮನಿಗೆ ಸ್ಥಳವಿರಲಿಲ್ಲವೇ?"

ಸೀತೆಯ ಬಾಳಿನ ಕಥೆಯನ್ನು ಓದಿದ ಪ್ರತಿಯೊಬ್ಬ ಓದುಗನ ಹೃದಯದಾಳದಿಂದ ಹೊರಬಂದ ಮಾತೋ ಎನ್ನುವಂತೆ ಆಶಾನರು ಸೀತಾ ಪಾತ್ರದಿಂದ ಪ್ರಕಟಗೊಳಿಸಿರುವರು. ಸೀತೆ ಮತ್ತೆ ಯೋಚಿಸುತ್ತಾಳೆ: ರಾಜ ನೀತಿಯನ್ನನುಸರಿಸಿ ತನ್ನ ಗುಪ್ತಚರದಿಂದ ಈ ಅಪಕೀರ್ತಿಯನ್ನು ಕೇಳಿ ರಘುವರ ಎಷ್ಟು ದುಃಖಿತನಾದನೋ ಏನೋ! ರಾಮ ಸಾಮಾನ್ಯ ವೀರನೇನಲ್ಲ. ಅತ್ಯಂತ ದುಷ್ಟರಾದ ರಾಕ್ಷಸರನ್ನು ಕೊಂದವನು. ವಾಲಿಯನ್ನು ನಿಗ್ರಹಿಸಿದವನು. ಅನೇಕ ಸಾಹಸಗಳಿಂದ ಮೆರೆದವನು. ಆದರೆ ನನ್ನ ವಿಷಯದಲ್ಲಿ ಕರುಣಾಳು ರಾಮನ ಹೃದಯ ಕಠಿಣ ವಾಯಿತೇಕೆ? ಉನ್ನತವಾದ ಪರ್ವತಕ್ಕೆ ಒಂದು ಕಂದರವಿದ್ದರೆ ಅದೂ ಒಂದು ರೀತಿಯಲ್ಲಿ ಶೋಭಿಸುವಂತೆ ಈ ಒಂದು ಕೆಲಸ ಶೋಭೆಯನ್ನುಂಟುಮಾಡುವುದೆಂದು ಬಗೆದನೋ ಏನೋ! ಸದಾ ಮಂಗಳಕಾರ್ಯಗಳನ್ನೆಸಗುವ ಸುಗುಣಿಯೂ ಸನ್ಮಾರ್ಗಿಯೂ ಆದ ರಾಮನಿಗೆ ಈ ಅವಗುಣ ತಾನೆ ಎಲ್ಲಿಂದ ಬಂತು? ಮುನಿಪುತ್ರನನ್ನು ಕೊಂದವನಲ್ಲವೇ ದಶರಥ! ತನ್ನ ಪತ್ನಿಗೆ ವರ ಗಳನ್ನು ಕೊಟ್ಟು ಬಳಿಕ ಪಶ್ಚಾತ್ತಾಪ ಪಡುತ್ತಾ ಸತ್ತವನಲ್ಲವೇ ದಶರಥ ಮಹಾರಾಜ! ಅದೇ ಗುಣಗಳು ರಾಮನಿಗೂ ಬಂದಿರ ಬಹುದು.

ಬಾಳಿನ ಬವಣೆಯಿಂದ ಬೆಂದು ಕಂದಿ ಕುಂದಿದ ಸೀತೆ ಮನ ಸ್ಸಿನ ಆಘಾತವನ್ನು ಸಹಿಸಲಾರದೆ ಮತಿವಿಭ್ರಮಣೆಗೊಳಗಾದವ

ಳಂತೆ ರಾಮನನ್ನು ದೂರಿದರೂ ಮನಸ್ಸು ಸಮಾಧಾನ ಸ್ಥಿತಿಗೆ ಬಂದಾಗ ರಾಮನ ಗುಣಗಳನ್ನು ಹೊಗಳುತ್ತಾಳೆ. ಅವನ ಪರಿಸ್ಥಿತಿಗಾಗಿ ಮರುಗಿ ಸಹಾನುಭೂತಿಯನ್ನು ವ್ಯಕ್ತಪಡಿಸುತ್ತಾಳೆ.

ರಾಮನಲ್ಲಿ ಯಾವುದೇ ದೋಷವನ್ನು ಕಂಡರೂ ರಾಮ ಪ್ರೀತಿಸಿದುದು ತನ್ನನ್ನು ಮಾತ್ರ; ಅನ್ಯಳನ್ನು ಆಶಿಸಲಿಲ್ಲ. ಯಜ್ಞ ಮಾಡುತ್ತಿದ್ದಾಗ ಯಜ್ಞಶಾಲೆಯಲ್ಲಿ ಸ್ವರ್ಣಸೀತೆಯೊಂದಿಗೆ ಯಜ್ಞವನ್ನು ನೆರವೇರಿಸಿದನೇ ಹೊರತು ಮತ್ತೊಬ್ಬಳನ್ನು ಸೀತೆಯ ಸ್ಥಾನಕ್ಕೆ ತರಲಿಲ್ಲ. ಪತ್ನಿಯನ್ನು ಹೊರಗಟ್ಟಿ ಪ್ರತಿಮೆಯನ್ನು ಆರಾಧಿಸಿದ ಪ್ರಾಣನಾಥನನ್ನು ಕುರಿತು ಸೀತೆ "ಪ್ರಿಯತಮಾ ನೀನು ನೀತಿಯ ಸೆರೆಮನೆಯಲ್ಲಿ ಸಿಕ್ಕಿಹೋದೆ" ಎಂದು ನೋಯುತ್ತಾಳೆ. ರಾಮನ ಧರ್ಮ ಸಂಕಟವಾದರೂ ಎಂತಹದು!

ತನಗೆ ಬೇಡವೆನ್ನಿಸಿದರೆ ರತ್ನ ಕಿರೀಟವನ್ನಾದರೂ ತ್ಯಜಿಸಬಹುದು. ಪರೋಪಕಾರಕ್ಕಾಗಿ ದೇಹವನ್ನಾದರೂ ತ್ಯಜಿಸಬಹುದು. ಆದರೆ ಜನರ ಇಚ್ಛೆಯಂತೆ ಇದು ಸರಿಯಲ್ಲವೆಂದು ತಿಳಿದೂ ಜೀವಹಿಡಿದು ರಾಜ್ಯವನಾಳುವುದು ಎಂತಹ ಕಷ್ಟ!

ಸೀತೆಯ ಯಾತನೆಗೊಂಡ ಹೃದಯ ಸ್ವಗತವಾಗಿ ತಾನು ತೋಡಿಕೊಳ್ಳ ಬೇಕೆನ್ನಿಸಿದ ಸಂಕಟವನ್ನೆಲ್ಲ ತೋಡಿಕೊಂಡ ಬಳಿಕ ರಾಮನನ್ನು ಕುರಿತು ಅವಳಿಗೆ ಅನುಕಂಪಮೂಡುತ್ತದೆ. ತಾನು ಆಡಿದ ನಿಂದೆಯ ಮಾತುಗಳನ್ನು ಕ್ಷಮಿಸುವಂತೆ ಸ್ವಗತವಾಗಿ ರಾಮನಲ್ಲಿ ಯಾಚಿಸುತ್ತಾಳೆ.

'ಕ್ಷುಭಿತೇಂದ್ರಿಯ ಞಾನ್ ಭವಾನಿಲಿ
ನ್ನುಪಸರ್ಪಿಚ್ಚ ಕಳಂಕರೇಖಗಳ್
ಅಭಿಮಾನಿನಿಯಾಂ ಸ್ವಕಾಂತಯಿಲ್
ಕೃಪಯಾಲ್ ದೇವ! ಭವಾನ್ ಕ್ಷಮಿಕ್ಕುಗ'

"ಮನಸ್ಸು ಸಂಕಟಗೊಂಡು ನಾನು ನಿನ್ನಲ್ಲಿ ಕಳಂಕಗಳನ್ನು ಹುಡುಕಿದೆ. ದೇವ! ಅಭಿಮಾನಿನಿಯಾದ ನಿನ್ನ ಪತ್ನಿಯನ್ನು ಕ್ಷಮಿಸಿಬಿಡು."

ನೀತಿಯ ನೆಲೆಯನ್ನೂ ಧರ್ಮಸೂಕ್ಷ್ಮತೆಯನ್ನೂ ಅರಿಯುವುದು ಕಷ್ಟ. ಗಾಳಿಯಂತೆ ಅದು ಆಗಾಗ ಬದಲಾಯಿಸ ಬಹುದು ಎಂದು ಹೇಳಿಕೊಂಡು ದುಃಖ ಭಾರದಿಂದ ಭೂಜಾತೆ ಈ ಲೋಕದ ಋಣಾನುಬಂಧವನ್ನು ಮುಗಿಸಿ ಅದೃಶ್ಯಳಾಗಲು ನಿಶ್ಚಯಿಸುತ್ತಾಳೆ. ರವಿ, ಚಂದ್ರ, ನಕ್ಷತ್ರ, ಸಂಧ್ಯೆ, ವನ, ಸುಮರಾಜಿ, ಭೂಮಿತಾಯಿ, ರಾಘವ ಎಲ್ಲರೂ ತನ್ನನ್ನು ಬೀಳ್ಕೊಡುವಂತೆ ಪ್ರಾರ್ಥಿಸುತ್ತ ಕೆಳಗುರುಳಿ ಮೂರ್ಛೆಹೋಗುತ್ತಾಳೆ.

ಅಷ್ಟರಲ್ಲಿ ತಾಪಸಿ ಸೀತೆಯನ್ನು ಹುಡುಕಿಕೊಂಡು ಅಲ್ಲಿಗೆ ಬಂದು ಅವಳನ್ನು ಆಶ್ರಮದ ಒಳಕ್ಕೆ ಕರೆದುಕೊಂಡು ಹೋಗಿ ತೀರ್ಥವನ್ನು ಪ್ರೋಕ್ಷಿಸಿ ಮಲಗಿಸುತ್ತಾಳೆ. ಆ ರಾತ್ರಿ ಕಳೆದು ಬೆಳಗಾಗುತ್ತದೆ. ಕೋಸಲ ದೇಶಕ್ಕೆ ಹೋಗಿದ್ದ ವಾಲ್ಮೀಕಿ ಋಷಿಗಳು ರಾಜನ ಸಂದೇಶದೊಂದಿಗೆ ಆಶ್ರಮಕ್ಕೆ ಹಿಂದಿರುಗುತ್ತಾರೆ. ಅವರು ಸೀತೆಯನ್ನು ಕುರಿತು "ಮನದ ದುಗುಡವನು ಬಿಡು ಬಾ ಮಗಳೆ ನನ್ನೊಡನೆ ಕೋಸಲಕೆ" ಎನ್ನಲು ಸೀತೆ ಅವರೊಡನೆ ಅವನತಮುಖಿಯಾಗಿ ವಾಲ್ಮೀಕಿ ಮಹರ್ಷಿಯ ಪಾದಗಳ ಕಡೆಗೇ ದೃಷ್ಟಿಯಿಟ್ಟು ನಡೆಯುತ್ತ ಶ್ರೀರಾಮನ ಸಭಾಗೃಹವನ್ನು ತಲಪುತ್ತಾಳೆ.

> 'ಮಿಂಡಾದದಂದಿಗ ಮೆತ್ತಿಯೊನ್ನನುಶಯಿ
> ಕ್ಲಾಂತಾಸ್ಯನಾಂ ಕಾಂತನೆ
> ಕಂಡಾಳ್ ಪೌರಸಮಕ್ಷ, ಮನ್ನಿಲಯಿಲಿ
> ಲೋಕಂ ವೆಡಿಞ್ಞಾಳ್ ಸತಿ'

ಅಲ್ಲಿ ನೆರೆದಿದ್ದ ಪೌರರ ಸಮ್ಮುಖದಲ್ಲಿ ಸೀತೆ ಒಮ್ಮೆ ತಲೆಯೆತ್ತಿ ರಾಮನ ಮುಖವನ್ನು ನೋಡುತ್ತಾಳೆ. ಒಮ್ಮೆ ರಾಮನ ದರ್ಶನಕ್ಕಾಗಿ ಕಾದಿದ್ದಾಳೋ ಎನ್ನುವಂತೆ ಅವನ ಪಾದಗಳ ಮೇಲೆ ಕುಸಿದು ಅಸು ನೀಗುತ್ತಾಳೆ.

ಸೀತೆ ಅಸುನೀಗುವ ಹಿಂದಿನ ರಾತ್ರಿ ಆಶ್ರಮದ ಏಕಾಂತ ಸ್ಥಳದಲ್ಲಿ ಕುಳಿತು ಸ್ವಗತದ ಮೂಲಕ, ಸೀತಾಪರಿತ್ಯಾಗ, ಅಗ್ನಿ ಪರೀಕ್ಷೆ, ರಾವಣ ಕುಂಭಕರ್ಣಾದಿಗಳ ವಧೆ, ದೀರ್ಘಕಾಲದ ವನವಾಸ; ದಶರಥನ ಮರಣ, ಸೀತೆಯ ವಿವಾಹ, ರಾಮನ ಜನನ, ದಶರಥನ ಪುತ್ರ ಕಾಮೇಷ್ಟಿಯಾಗ — ಹೀಗೆ ಸೀತೆಯ ನೆನಪು ಹಿಂದೆ ಹಿಂದೆ ಹೋಗುವಂತೆ ಮಾಡಿ, ಒಟ್ಟು ರಾಮಾಯಣ ಕಥೆಯನ್ನು ಸೀತೆಯಿಂದ ಹೇಳಿಸಿ ಉಳಿದ ಕಥಾ ಪಾತ್ರಗಳನ್ನೆಲ್ಲ ವಿಮರ್ಶಾತ್ಮಕ ದೃಷ್ಟಿಯಿಂದ ನೋಡುವ ತಂತ್ರವನ್ನು ಆಶಾನರು ಸೀತಾಕಾವ್ಯದಲ್ಲಿ ಪ್ರತಿಪಾದಿಸಿದ್ದಾರೆನ್ನಬಹುದು.

**ಪ್ರರೋದನಂ**

ವ್ಯಾಕರಣ, ಛಂದಸ್ಸು, ಅಲಂಕಾರ ಮುಂತಾದ ವಿಷಯಗಳಲ್ಲಿ ಕೂಲಂಕಷವಾದ ಸಂಶೋಧನೆಗಳನ್ನು ನಡೆಸಿ ಪ್ರೌಢ ಗ್ರಂಥಗಳನ್ನು ರಚಿಸಿ, ಮಲಯಾಳ ಭಾಷೆಯನ್ನು ಅತ್ಯಂತ ಪುಷ್ಟಿಗೊಳಿಸಿದ ಎ. ಆರ್. ರಾಜರಾಜವರ್ಮರಂತಹ ಮತ್ತೊಬ್ಬ ಪಂಡಿತವರೇಣ್ಯ ಕೇರಳದಲ್ಲಿ ಕಾಣಸಿಗುವುದು ದುರ್ಲಭ. ಎ. ಆರ್. ರಾಜರಾಜವರ್ಮರು ನ್ಯುಮೋನಿಯದಿಂದ ತೀರಿಕೊಂಡಾಗ ಕೇರಳದ ಪತ್ರಿಕೆಗಳೆಲ್ಲವೂ 'ಕಂಬನಿಗರೆದುವು. ಕುಮಾರನಾಶಾನರು ಉತ್ತರ ತಿರುವಾಂಕೂರಿನಲ್ಲಿ

ಪ್ರವಾಸವನ್ನು ಕೈಗೊಂಡಿದ್ದಾಗ ಈ ವಾರ್ತೆಯನ್ನು ಕೇಳಿ ಅವರಿಗೆ ಹೃದಯ ಮರಗಟ್ಟಿ ಹೋದಂತಾಯಿತು. ಆ ಮಹಾ ಜ್ಯೋತಿ ಅದೃಶ್ಯವಾದುದನ್ನು ಕುರಿತು ಕವಿಯ ಮನಸ್ಸಿಗಾದ ದುಃಖ ಬಹುಮುಖವಾಗಿ ವರ್ಧಿಸಿ, ಅವರ ಮನಸ್ಸು ಅಸ್ವಸ್ಥ ರಾದಾಗ ಒಂದು ಎಲಿಜಿಯನ್ನು ಬರೆಯಲು ಪ್ರಾರಂಭಿಸಿದರು. ಇವಕ್ಕೆ ಮೊದಲು ಆಶಾನರ ಮಾತೃಶ್ರೀ ಅವರು ನಿಧನ ಹೊಂದಿದಾಗ ಬರೆದ 'ಒರು ಅನುತಾಪಂ' (ಒಂದು ಅನುತಾಪ) ಎಲಿಜಿಯಲ್ಲಿ ಬಳಸಿದ ವಿಯೋಗಿನೀ ವೃತ್ತವನ್ನೇ ಅಳವಡಿಸಿ ರಚಿಸಿದ ಖಂಡಕಾವ್ಯ 'ಪ್ರರೋದನಂ'.

ಷೆಲ್ಲಿಯ 'ಅಡೊನೆ'ಯನ್ನು ಅನುಕರಿಸಿ ಬರೆದ 'ಪ್ರರೋದನ' ಕಾವ್ಯದಲ್ಲಿ ಕುಮಾರನಾಶಾನರಿಗಿಂತ ಆರೇಳು ವರ್ಷ ಹಿರಿಯ ರಾಗಿದ್ದ ಎ. ಆರ್. ರಾಜರಾಜವರ್ಮರನ್ನು ಕುರಿತು ಆಶಾನರಿ ಗಿದ್ದ ಗೌರವಾದರಗಳ ಆಳವನ್ನರಿಯಲು ಅವಕಾಶವಿದೆ.

ಯಾವುದು ಜೀವನ ಅಂತ್ಯ? ಜೀವನದ ಅರ್ಥವೇನು? ವಿಧಿವಿಲಾಸ ನಿರಪರಾಧಿಗೆ ತಂದೊಡ್ಡುವ ಮರಣಕ್ಕೇನು ಕಾರಣ? ಮುಂತಾದ ವಿಷಯಗಳನ್ನು ಚಿಂತಿಸುವುದು ಈ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿರುವ ಕಾವ್ಯವಸ್ತು. ಜೀವನದಲ್ಲಿರು ವುದು ದುಃಖ ಮಾತ್ರವಲ್ಲ ಸುಖವೂ ಉಂಟು. ದುಃಖದ ನೆಳಲಿನಿಂದ ಸುಖವನ್ನು ನಾಶಮಾಡಿಕೊಳ್ಳುವ ಅವಶ್ಯಕತೆಯಿಲ್ಲ. ಅಷ್ಟೇ ಅಲ್ಲ ಯಾವ ದುಃಖವನ್ನೂ ಸಹನೀಯವೆನ್ನಿಸುವ ಒಂದು ದಿವ್ಯ ಶಕ್ತಿಯಿದೆ. ಅದು ಪ್ರೇಮ. ಪ್ರೇಮರಹಿತ ಜೀವನ ಜೀವನವಲ್ಲ ಎನ್ನುವುದು ಕವಿಯ ಮುಖ್ಯ ಸಂದೇಶ.

ಭಾರತೀಯ ದರ್ಶನದಲ್ಲಿ ಮಾನವನ ಜೀವನವನ್ನೂ ಮರಣ ವನ್ನೂ ಮರಣಾನಂತರದ ಸ್ಥಿತಿಯನ್ನೂ ಕುರಿತು ನಡೆಸಿಕೊಂಡು

ಬಂದಿರುವ ದೀರ್ಘಾನ್ವೇಷಣೆ, ಪ್ರರೋದನದಂತಹ ಒಂದು ಶೋಕ ಗೀತಾತ್ಮಕ ಕಾವ್ಯದಲ್ಲಿಯೂ ಅನಿವಾರ್ಯವಾಗಿ ಕಾಣಿಸಿ ಕೊಂಡಿದೆ.

## ಪ್ರರೋದನ ಕಾವ್ಯದ ಸಂವಿಧಾನ

ರಾಜರಾಜವರ್ಮರ ವಿಯೋಗದಿಂದ ಕೇರಳಮಾತೆ ಆರ್ತ ಳಾಗಿ ವಿಲಾಪಿಸುತ್ತ ರಾಜರಾಜವರ್ಮರ ಕಳೇಬರವನ್ನು ಕೊಂಡೊಯ್ದು ಸ್ಮಶಾನಕ್ಕೆ ಬರುತ್ತಾಳೆ. ಭಾಸ ಕಾಳಿದಾಸಾದಿ ಮಹಾಕವಿಗಳು ಸ್ವರ್ಗದಲ್ಲಿ ನಿಂತು ರಾಜರಾಜವರ್ಮರನ್ನು ಸ್ವಾಗತಿಸುತ್ತಿದ್ದಾರೆ.

ಆಶಾನರ ದುಃಖ ಇಮ್ಮಡಿಯಾಗುತ್ತದೆ.

ದುಃಖದ ಅಗ್ನಿಯಲ್ಲಿ ಬೇಳಿಸಿ, ಕಣ್ಣೀರಿನಲ್ಲಿ ಮಿಾಯಿಸಿ, ಮನುಷ್ಯನ ಜೀವನದ ಮೇಲೆ ವಿಧಿಯೆಸಗುವ ದ್ರೋಹವನ್ನು ನೆನೆಸಿಕೊಂಡು ಆಶಾನರು ಚಿಂತೆಗೊಳಗಾಗುತ್ತಾರೆ. ಮರಣದ ರಹಸ್ಯವೇ ಮನುಷ್ಯನ ಜೀವನದ ಬಹುದೊಡ್ಡ ಪ್ರಶ್ನೆ. ಇದರ ಅರ್ಥವೇನು? ಯಾವುದಾದರೂ ಅರ್ಥವನ್ನು ಕಂಡು ಹಿಡಿಯಲು ಸಾಧ್ಯವೆ? ಹೀಗೆ ಚಿಂತಿಸಿ ಚಿಂತಿಸಿ ಕಡೆಗೆ ಕವಿಗೆ ಅನ್ನಿಸುವುದು "ಪ್ರೇಮಜೀವನದಿಂದ ಲಭಿಸುವ ಮಹತ್ತಾದ ಅಮೃತ ವಿಶ್ವದೊಂದಿಗೆ ಲೀನಗೊಳ್ಳುವ ಪರಮ ಮಾರ್ಗ" ಎಂದು ಸಮಾಧಾನ ಪಟ್ಟುಕೊಳ್ಳುತ್ತ ಎ. ಆರ್. ಆರ್. ಅವರ ಮರಣವನ್ನು ಕುರಿತ ಶೋಕದಿಂದ ಪ್ರಾರಂಭವಾದ ಕಾವ್ಯ ಮುಕ್ತಾಯಗೊಳ್ಳುತ್ತದೆ.

## ದುರವಸ್ಥ

"ವಿಧಿಯ ಕೈವಾಡಕ್ಕೆ ಸಿಕ್ಕಿ ಸಾಮಾನ್ಯವಾಗಿ ಜೀವನದಲ್ಲಿ ಒಮ್ಮೆಯೂ ನಿರೀಕ್ಷಿಸಲು ಸಾಧ್ಯವಿಲ್ಲದ ರೀತಿಯಲ್ಲಿ ಉಚ್ಚ ನೀಚ ಜಾತಿಗಳಲ್ಲಿರುವ ನಾಯಕಿ ನಾಯಕರನ್ನು ಒಂದುಗೂಡಿಸಿ ಅವರ ವಿವಾಹ ಬಂಧನದ ಮೂಲಕ ಜಾತ್ಯಾಚಾರಗಳು ನಿರರ್ಥಕವಾದುವು ಎನ್ನುವುದನ್ನು ತೋರಿಸಿಕೊಡಲು* ಕುಮಾರನಾಶಾನರು ರಚಿಸಿದ 'ಗಾಥಾ' ರೀತಿಯ 1700 ಪಾದಗಳ ಕೃತಿ 'ದುರವಸ್ಥ'."

ಕ್ರಿ. ಶ. 1921 ರಲ್ಲಿ ಕೇರಳೀಯರನ್ನು ನಡುಗಿಸಿದ ದಾರುಣ ಘಟನೆ ಮಾಪಿಳ್ಳೆಗಳ ಲೂಟಿ. ಆ ಭಯಂಕರ ವಿಪತ್ತಿನಲ್ಲಿ ಮನೆ, ಬಂಧುಗಳು, ಎಲ್ಲವೂ ಕೈಬಿಟ್ಟುಹೋದ ಒಬ್ಬ ನಂಬೂದಿರಿ ಕನ್ಯೆ ಒಬ್ಬ ಪೊಲೆಯನ ಗುಡಿಸಿಲಿಗೆ ಬಂದು ಆಶ್ರಯ ಪಡೆಯುತ್ತಾಳೆ. ಬೇರೆ ಯಾವ ಮಾರ್ಗವೂ ಇಲ್ಲದೆ ಅವನ ಗುಡಿಸಿಲಿನಲ್ಲಿ ಜೀವಿಸಬೇಕಾಗಿ ಬಂದಾಗ ಅವಳು ತನಗೆ ಆಶ್ರಯದಾತನಾಗಿದ್ದ ಆ ಪೊಲೆಯನನ್ನೇ ವರಿಸುವುದು 'ದುರವಸ್ಥ' ಕಾವ್ಯದ ಕಥಾವಸ್ತು.

ಕಥಾನಾಯಕಿ ಸಾವಿತ್ರಿ. ನಾಯಕ ಚಾತ್ತ. ಪ್ರಾಣಭೀತಿಯಿಂದ ಪೊಲೆಯರ ಚಾತ್ತನ ಗುಡಿಸಿಲನ್ನು ಹೊಕ್ಕ ಬ್ರಾಹ್ಮಣ ಕನ್ಯೆ ಸಾವಿತ್ರಿ ಯೋಚಿಸುತ್ತಾಳೆ: "ಇಲ್ಲಿಂದ ಹಿಂದಿರುಗಿಹೋದರೆ ಹಿಂದಿನಂತೆ ನನ್ನನ್ನು ನಂಬೂದಿರಿ ಸ್ತ್ರೀ ಎಂದು ಯಾರೂ ಪರಿಗಣಿಸುವುದಿಲ್ಲ. ವೈದಿಕನನ್ನು ಪ್ರೀತಿಪಡಿಸಿ ತನ್ನನ್ನು ವರಿಸು

---

* ಶೂರನಾಡ್ ಕುಂಜನ್ ಪಿಳ್ಳೆ—ಕುಮಾರನಾಶಾನರನ್ನು ಕುರಿತು ಪು. 142–43

ವಂತೆ ಮಾಡಲು ತನ್ನ ಕೈಯಲ್ಲಿ ಹಣವಿಲ್ಲ. ಹಣವನ್ನು ಕೊಡಲು ಬಂಧುಗಳು ಯಾರೂ ಜೀವಿಸಿಲ್ಲ. ಅದೆಲ್ಲ ಲಭಿಸಿದರೂ ಹೊಲೆಯರ ಗುಡಿಸಿಲಿಗೆ ಕಾಲಿರಿಸಿದ ತಪ್ಪಿಗೆ ಬಂಧುಗಳು ಹೊರಗೆ ಹಾಕುತ್ತಾರೆ. ಈ ಲೂಟಿಯು ಕಾರಣದಿಂದಾಗಿ ಬೇರೆ ಊರಿಗೋ ಪಟ್ಟಣಕ್ಕೋ ಹೋಗಿ ಯಾರದೋ ಮನೆಗೆಲಸ ಮಾಡಿಕೊಂಡಿರುವುದಕ್ಕೆ ನನ್ನಿಂದ ಸಾಧ್ಯವಿಲ್ಲ. ನಾಯರರು, ತೀಯರು ಮುಂತಾದ ಹಿಂದುಗಳು ಕೂಡ ನನ್ನನ್ನು ಗೌರವಿಸು ವುದಿಲ್ಲ"—ಹೀಗೆ ಅವಳ ಮನಸ್ಸಿನಲ್ಲಿ ಚಿಂತನ ಮಂಥನಗಳು ನಡೆದು, ಚಾತ್ತನನ್ನು ಕುರಿತು ಯೋಚಿಸಿದಾಗ ಅವನನ್ನು ಕುರಿತು ಅವಳ ಗೌರವ ಅನುಕಂಪಗಳು ಇಮ್ಮಡಿಯಾಗುತ್ತವೆ. ಅವನ ಪ್ರೀತಿ ಮತ್ತು ತ್ಯಾಗ ಬುದ್ಧಿಗಳು ಅವಳ ಮನಸ್ಸನ್ನು ಆಕರ್ಷಿಸುತ್ತವೆ.

'ತರುಣನ್ ಸುಮುಖನ್ ದೃಢಕಾಯನಂದಿಕ್ಕಜ್ಞಿತ್ತಿ
ನೀಯೇಕವಾಯೆನ್ ಅಂದಿಗತ್ತೆಜಾನುಂತಂಜಿಯುರಂಗುನ್ನು'

"ಕಾರ್ಗತ್ತಲು ಕವಿದ, ಏಕಾಂಗಿಯಾದ ನನ್ನ ಜೀವನದಲ್ಲಿ ತರುಣನೂ ಸುಮುಖನೂ ದೃಢಕಾಯನೂ ಆದ ನೀನು ಪ್ರವೇಶಿಸಿದೆ" ಎನ್ನುತ್ತಾಳೆ.

'ವಿನಯಪಾಶಂ ಆಯತ್ತಮಲ್ಲಿದು ಪೋಲೋದಿಕ್ಕ
ನ್ನಾರ್ಕುಂ ಪ್ರಾಯೇಣ ತೋಲಿಟ್ಟೋೕರುಣ್ಣಿವಾರ್ಕುಂ'

"ಇಂತಹ ವಿನಯ ಸೌಜನ್ಯಗಳು ವೇದಜ್ಞರಾದ ಹಿರಿಯ ಬ್ರಾಹ್ಮಣರಲ್ಲಿಯಾಗಲಿ, ಕಿರಿಯ ಬ್ರಾಹ್ಮಣರಲ್ಲಿಯಾಗಲಿ ಕಂಡುಬರಲಾರವು."

ಹಾಗೆಯೇ ಅವಳ ಆಲೋಚನೆ ಮುಂದುವರಿಯುತ್ತದೆ.

'ಸತ್ವವಿಶುದ್ಧಿಯುಂ ಸ್ನೇಹವುಂ ತೇಜಸ್ಸು
ಮುತ್ತಮ ಜಾತಿಯಿಲೆನ್ನಪೋಲೆ
ಅಂತ್ಯಜನ್ಮಾರಿಲು ಕಾಣುಗಿಲಜ್ಜಿಯ್ಕ
ಜ್ಞಿಂದೇಯಿವರ್ ತಮ್ಮಿಲ್‌ಭೇದಮುಳ್ಳೂ
ಕಿಲ್ಲಿಲ್ಲ ಧಾತಾವೇ ನಿನ್ತೃಕ್ಕಣ್ಣಿನ್ನು
ತೆಲ್ಲುವಿರಿಜ್ಜಾತಿಭೇದಜ್ಜಳಿಲ್ಲ'

"ಸತ್ಯ, ವಿಶುದ್ಧಿ, ಪ್ರೀತಿ, ತೇಜಸ್ಸು ಮುಂತಾದವು ಉತ್ತಮ ಜಾತಿಯಲ್ಲಿರುವಂತೆಯೇ ಅಂತ್ಯಜರಲ್ಲಿಯೂ ಕಂಡುಬರುತ್ತವೆ. ಆದರೆ ಇವರೇತಕ್ಕೆ ಪರಸ್ಪರ ಭೇದವನ್ನುಂಟುಮಾಡಿಕೊಂಡಿದ್ದಾರೆ? ದೇವರ ದೃಷ್ಟಿಯಲ್ಲಿ ಈ ಜಾತಿಭೇದಗಳು ಸ್ವಲ್ಪವೂ ಇಲ್ಲ."

ಹಿಂದಿನ ಕಾಲದ ಋಷಿಗಳಿಗೆ ಈ ಜಾತಿಭೇದಗಳಿರಲಿಲ್ಲ. ಚಾತ್ತನ ಮೈಬಣ್ಣ ಕಪ್ಪಿರಬಹುದು. ಅದು ದೋಷವೆ? ಆರ್ಯ ದ್ರಾವಿಡರ ಸೌಂದರ್ಯಮೂರ್ತಿಯಾದ ಕಾಮದೇವ ಕಪ್ಪಲ್ಲವೆ? ಅದೇ ಸೌಂದರ್ಯಮೂರ್ತಿಯಂತೆ, 'ಚಾತ್ತನೆ ಕಾರ್ಮುಗಿಲ್ ವರ್ಣನೆ ವೀಕ್ಷಿಕ್ಕುಞಾನ್'—ಕಾರ್ಮುಗಿಲು ವರ್ಣನಾದ ಚಾತ್ತನನ್ನು ನಾನು ಕಾಣುವುದು. ಬ್ರಾಹ್ಮಣರಿಗೂ ಆರಾಧ್ಯಮೂರ್ತಿಯಲ್ಲವೆ ಕಾರ್ಮುಗಿಲವರ್ಣನಾದ ಶ್ರೀಕೃಷ್ಣ? ಕಪ್ಪುದೇಹದ ಚಾತ್ತನಲ್ಲಿ ಶ್ರೀಕೃಷ್ಣನನ್ನು ಕಂಡು ತಾನು ರಾಧೆಯಾಗುತ್ತಾಳೆ. ಗುಡಿಸಲು ಬೃಂದಾವನವಾಗುತ್ತದೆ. ಚಾತ್ತನನ್ನು ವರಿಸುತ್ತಾಳೆ. 'ಅಗ್ನಿಸಾಕ್ಷಿಯಾಗಿ ವಿವಾಹ ನೆರವೇರಿತು.'

ಈ ಕೃತಿ ರಚನೆಯಾದಾಗ ಸಮಾಜದಲ್ಲಿ ಹೊಸ ಗೊಂದಲವನ್ನುಂಟುಮಾಡಿತು. ಅನೇಕರು ಕುಮಾರನಾಶಾನರನ್ನು ಕ್ರಾಂತಿಕಾರ ಕವಿಯೆಂದು ಕರೆದರು.

## ಚಂಡಾಲ ಭಿಕ್ಷುಕಿ

"ಒಬ್ಬ ಪುರುಷನನ್ನು ಅನ್ವೇಷಿಸುತ್ತ ನಡೆಯುವ ಒಬ್ಬ ಯುವತಿಯ ಸಾಹಸಯಾತ್ರೆ ನಳಿನಿ, ಲೀಲ, ಚಂಡಾಲಭಿಕ್ಷುಕಿ ಈ ಮೂರು ಕಾವ್ಯಗಳಲ್ಲಿಯೂ ಕಂಡು ಬರುತ್ತದೆ. ಮುಟ್ಟ ಬಾರದು, ಮನೆಯೊಳಕ್ಕೆ ಬರಬಾರದು – ಎಂದು ಇತರರು ಹೊರಗೆ ನಿಲ್ಲಿಸಿದ ಒಬ್ಬ ಚಂಡಾಲಿಯನ್ನು ಜ್ಞಾನೋಪದೇಶ ದಿಂದ ಧನ್ಯೆಯನ್ನಾಗಿ ಮಾಡಿ ತನ್ನ ಶಿಷ್ಯಳೆಂದು ಗಣಿಸಿ, ಸ್ವೀಕ ರಿಸಿ ಭಿಕ್ಷು ಮಂದಿರಕ್ಕೆ ಪ್ರವೇಶ ದೊರಕಿಸಿಕೊಟ್ಟ ಭಗವಾನ್ ಬುದ್ಧನ ಮಾನವ ಪ್ರೇಮದ ಆಳವೂ ವೈಶಾಲ್ಯವೂ ಕವಿ ಭಾವನೆಯಲ್ಲಿ ವಿಶ್ವಸ್ನೇಹಕ್ಕೆ ಅತ್ಯಂತ ಅನುರೂಪವಾಗಿ ಹೊಂದಿ ಕೊಂಡಿತು. ಲೋಕಸೇವೆಯೇ ಅತ್ಯುತ್ಕೃಷ್ಟ ಧರ್ಮವೆಂದು ನಳಿನಿಯ ಯತಿಯೂ 'ಲೀಲೆ' ಯ ಮಾಧವಿಯೂ ಸೂಚಿಸಿದ ಮಹಾತತ್ವ, ಪೂರ್ಣತೆಗೆ ಸಮೀಪವಾಗುವುದು ಚಂಡಾಲ ಭಿಕ್ಷುಕಿಯ ಬುದ್ಧನ ಪಾತ್ರದಲ್ಲಿ"*

ಚಂಡಾಲ ಭಿಕ್ಷುಕಿಯ ಕಥೆ ಬುದ್ಧನ ಕಾಲಕ್ಕೆ ಸೇರಿದುದು. ಎರಡು ಸಾವಿರದ ಐನೂರು ವರ್ಷಗಳ ಹಿಂದೆ ಉತ್ತರ ಹಿಂದೂ ಸ್ಥಾನದಲ್ಲಿ ಪ್ರಖ್ಯಾತವಾಗಿದ್ದ ಶ್ರಾವಸ್ತಿಪುರದ ಪಕ್ಕದ ಊರು. ಕಡುಬೇಸಗೆಯ ಒಂದು ಮಧ್ಯಾಹ್ನ. ಊರಿನ ಪೂರ್ವಭಾಗದಲ್ಲಿ ಉದ್ದವಾದ ರಸ್ತೆ. ಸುತ್ತಮುತ್ತ ಕಾಡು. ಬಿಸಿಲ ಬೇಗೆಯಿಂದ ಬಾಯಾರಿದ್ದ ಪಶುಪಕ್ಷಿಗಳು. ಎಲ್ಲೆಲ್ಲೂ ಮೌನ.

ಅಲ್ಲಿ ನಾಲ್ಕು ಕಾಲುದಾರಿಗಳು ಸೇರುವ ಒಂದು ಸ್ಥಳ. ಅಲ್ಲೊಂದು ಮರ. ಅದರ ಬೇರು ದಾರಿ ಹೋಕರಿಗೆ ಕುಳಿತು

---

* ಕುಮಾರನಾಶಾನನ್ನು ಕುರಿತು ಶೂರನಾಡ್ ಕುಂಜನ್ ಪಿಳ್ಳೈ. ಪು. 129

ಕೊಳ್ಳುವ ಆಸನದಂತಿದೆ. ಆ ದಾರಿಯಲ್ಲಿ ಹಳದಿ ವಸ್ತ್ರವನ್ನುಟ್ಟು ಕೇಶಮುಂಡನ ಮಾಡಿಸಿಕೊಂಡಿದ್ದ ಒಬ್ಬ ಬೌದ್ಧ ಭಿಕ್ಷು ಬರುತ್ತಾನೆ. ಅವನ ಕೈಯಲ್ಲಿ ಒಂದು ಮರದ ಭಿಕ್ಷಾಪಾತ್ರೆ. ಅವನು ತುಂಬ ಬಾಯಾರಿದ್ದ. ಆ ಹೊತ್ತಿಗೆ ಸರಿಯಾಗಿ ಅಲ್ಲಿಗೆ ಒಬ್ಬ ಕನ್ಯೆ ಬರುತ್ತಾಳೆ. ಅವಳ ಸೊಂಟದ ಮೇಲೆ ಒಂದು ಕೊಡ. ಮತ್ತೊಂದು ಕೈಯಲ್ಲಿ ಹಗ್ಗ. ಅವಳು ಬರುತ್ತಿದ್ದುದನ್ನು ಕಂಡು ಬಾಯಾರಿದ ಭಿಕ್ಷು ಸಂತಸಗೊಂಡು ಅವಳ ಕಡೆಗೆ ನೋಡುತ್ತಾನೆ.

ಸಜ್ಜನರ ಕಷ್ಟದಲ್ಲಿ ವಿಧಿ ನಾನಾರೂಪದಲ್ಲಿ ಸಹಾಯ ಮಾಡುತ್ತದೆ. ನಿರ್ಮಲವಾದ ಕೊಡವನ್ನು ಬಾವಿಗೆ ಬಿಟ್ಟು ನೀರನ್ನೆಳೆದುಕೊಂಡು ಹೋಗುತ್ತಿರುವಾಗ ಭಿಕ್ಷು ಅವಳ ಹತ್ತಿರ ಬಂದು ನೀರು ಕೇಳುತ್ತಾನೆ.

ಅದನ್ನು ಕೇಳಿ ಆ ಕನ್ನಿಕೆ ಬೆಚ್ಚುತ್ತಾಳೆ.

‘ ಅಲ್ಲಲ್ಲೆಂದು ಕಥಯಿದು ಕಷ್ಟಮೇ!
ಅಲ್ಲಲಾಲಜ್ಜ ಜಾತಿ ಮರನ್ನಿದೋ ?
ನೀಚನಾರಿತನ್ ಕಯ್ಯಾಲ್ ಜಲಂವಾಜ್ಜಿ
ಯಾಚಮಿಕ್ಕುಮೋ ಚೊಲ್ಲೆಮಿಮಾರ್ಯನ್ಮಾರ್ ? ’

“ಏನು ಕಥೆ ಇದು ? ಅಯ್ಯೋ ಕಷ್ಟವೇ! ದಾಹದ ನಿಮಿತ್ತದಿಂದ ಜಾತಿಯನ್ನು ಮರೆಯಬಹುದೇ ? ನೀಚರ ಕೈಯ ನೀರನ್ನು ಮೇಲು ಕುಲದವರಾದ ನೀವು ಕುಡಿಯಬಹುದೇ ? ಸ್ವಾಮಿ ನೀವು ಬೇಸರ ಪಟ್ಟುಕೊಳ್ಳಬೇಡಿ. ಚಂಡಾಲಿಯಾದ ನನ್ನ ಕೈಯಿಂದ ನೀವು ನೀರು ಕುಡಿಯಬಾರದು. ಅದರಿಂದ ನಿಮಗೆ ಪಾಪವುಂಟಾಗುತ್ತದೆ. ನಾನು ಬಡಗುಡಿಸಿಲಿನಲ್ಲಿ ಬಾಳುವ ಗುರಿಕಾರ ಚಾಮರನ ಮಗಳು” ಎಂದು ಹೇಳುತ್ತಾಳೆ.

ಅವಳ ಮಾತನ್ನು ಕೇಳಿದ ಭಿಕ್ಷು ಅವಳಿಗೆ ಉತ್ತರಿಸಿದ.

‘ ಜಾತಿಚೋದಿಕ್ಕುನ್ನಿಲ್ಲ ಞಾನ್‌ಸೋದರೀ
ಚೋದಿಕ್ಕುನ್ನು ನೀರ್ ನಾವು ವರಂಡಹೋ !
ಭೀತಿವೇಂಡಾ ತರಿಗದೆನಿಕ್ಕುನೀ ’

“ಸಹೋದರೀ, ನಾನು ನಿನ್ನ ಜಾತಿಯನ್ನು ಕೇಳಲಿಲ್ಲ. ಬಾಯಾರಿಕೆಯಿಂದ ಗಂಟಲಾರಿದೆ. ನೀನು ಭಯಪಡಬೇಡ; ಬೇಸರಪಡಬೇಡ. ನನಗೆ ನೀರನ್ನು ನೀಡು”.ಎಂದು ಕೈಗಳನ್ನು ಮುಂದೆ ಚಾಚುತ್ತಾನೆ. ಅನಂತರ ಅವಳು ಮರುಮಾತಾಡದೆ ನೀರನ್ನು ಅವನ ಕೈಗಳಿಗೆ ಸುರಿಯುವಾಗ ಅವಳ ಕಪ್ಪಾದ ತಲೆ ಕೂದಲು ಇಳಿಬಿದ್ದು ಅವಳ ಮುಖವನ್ನು ಮರೆಮಾಡಿತ್ತು. ಸೀರೆಯನ್ನು ಸಾವರಿಸಿಕೊಂಡು ಬಗ್ಗಿ ನೀರು ಸುರಿಯುತ್ತಿದ್ದಾಗ ಅವಳ ಮುಖ ಮೋಡಗಳ ಎಡೆಯಲ್ಲಿ ಹೊಳೆಯುವ ನಕ್ಷತ್ರ ದಂತಿತ್ತು. ನೀರನ್ನು ಕುಡಿದಾದ ಮೇಲೆ ಭಿಕ್ಷು ಹೇಳುತ್ತಾನೆ:

‘ ಪುಣ್ಯಶಾಲಿನಿ ನೀಪಗನ್ನಿರ್ಡುಮಿ
ತ್ತಣ್ಣೀರ್ ತನ್ನುಡೆಯೋರೋ ತುಳ್ಳಿಯುಂ
ಅಂತಮಟ್ಟಸುಹೃತಹಾರಜ್ಞಳ್‌ನಿ
ನ್ನಂತರಾತ್ಮವಿಲರ್ಪಿಕ್ಕುನ್ನುಂಡಾವಾಂ’

“ಪುಣ್ಯಶಾಲಿನಿ ! ನೀನೆರೆದ ಜಲದ ಪ್ರತಿಕಣವು ನಿನ್ನಂತ ರಾತ್ಮಕ್ಕೆ ಪುಣ್ಯಾಭರಣವು” ಅದನ್ನು ಕೇಳಿ ಈತ ಆತ್ಮ ನಿರ್ವಾಣ ಶಿಕ್ಷಿತ ಭಿಕ್ಷುಗಳಲ್ಲಿ ಅಗ್ರಗಣ್ಯ ಎಂದು ಭಾವಿಸು ತ್ತಾಳೆ. ಅವನು ನೀರು ಕುಡಿದು ಸಂತೃಪ್ತನಾದುದನ್ನು ನೋಡಿ ರೋಮಾಂಚನಗೊಳ್ಳುತ್ತಾಳೆ.

ತನ್ನ ಬಾಯಾರಿಕೆಯನ್ನು ಹೋಗಲಾಡಿಸಿದ ಕನ್ಯೆಗೆ ಭಿಕ್ಷು: "ನನ್ನ ಗುರು ನಿರ್ವಾಣವನ್ನು ಕಂಡಿರುವ ಮಹಾಸಿದ್ಧನು, ದಯಾಮಯನು, ಸರ್ವಲೋಕವಂದ್ಯನು. ಅವನು ನಿನ್ನನ್ನು ಅನುಗ್ರಹಿಸುವನು. ನಾನು ಇನ್ನು ಹೋಗುತ್ತೇನೆ."

ಎಂದು ಹೇಳಿ ಭಿಕ್ಷು ಅಲ್ಲಿಂದ ಹೊರಟ. ನೀರನ್ನು ತೆಗೆದು ಕೊಂಡು ಹಗ್ಗವನ್ನು ಸುತ್ತಿ ಕೈಯಲ್ಲಿ ಹಿಡಿದು ಮನೆಯ ಕಡೆ ಹೊರಟಳು. ಆವರೆ ಮನೆಯಿಂದ ಹೊರಟಾಗಿನ ಉತ್ಸಾಹ ಹಿಂದಿ ರುಗುವಾಗ ಮರೆಯಾಗಿತ್ತು. ದೇಹ ಹಿಂದಿರುಗಿದರೂ ಮನಸ್ಸು ಭಿಕ್ಷುವನ್ನುಹಿಂಬಾಲಿಸಿತ್ತು.ಮನಸ್ಸ ಮಾರುಗೊಟ್ಟು ಏನನ್ನೋ ಕಳೆದುಕೊಂಡವಳಂತೆ ಮನೆ ಸೇರಿದಳು. ವಿರಹ ತಾಪಕ್ಕೊಳ ಗಾದಳು. ಕಾಲ ಕಳೆಯುವುದೇ ಕಷ್ಟವಾಯಿತು. ಎಷ್ಟೋ ರಾತ್ರಿಗಳನ್ನು ದುಃಖಿಸುತ್ತಾ ನೂಕಿದಳು. ಕಡೆಗೊಂದು ದಿನ ಬೆಳಗಾಗುವ ಮುನ್ನ ಮನೆ ಬಿಟ್ಟು ಹೊರಟಳು. ಭಿಕ್ಷು ನಡೆದ ದಾರಿಯಲ್ಲಿಯೇ ನಡೆದು ಶ್ರಾವಸ್ತಿಪುರದ ಪರಿಶುದ್ಧ ಜೇತ್ರ ವನದ ವಿಹಾರದ ಮಾರ್ಗವನ್ನು ಸೇರಿದಳು. ಆ ದಾರಿಯಲ್ಲಿ ಸಾಗಿದ ಚಂಡಾಲ ಕನ್ಯೆ ಆನಂದನನ್ನು ಕಂಡಳು. ಅವನು ಅವ ಳನ್ನು ಗುರುದೇವನ ಸನ್ನಿಧಿಗೆ ಕರೆದುಕೊಂಡು ಹೋದ.

ಅವಳನ್ನು ಕಂಡು ಭಗವಾನ್ ಬುದ್ಧ ಹೇಳುತ್ತಾನೆ:

'ಮಗಳೆ ನೀ ಪೋನ್ನದು ಭಂಗಿಯಾಯಿ
ಸಕಲ ಮರಿಞ್ಞುನಾಂ ಕಾರ್ಯಂ ಭದ್ರೇ
ಅನಘನಾನಂದನು ತಣ್ಣೀರ್‌ನಲ್ಕಿ
ಕ್ಕನಿವಾರ್ನವತ್ನೇ ನೀ ದಾಹಂ ತೀರ್ತ'

"ಮಗಳೆ ನೀ ಬಂದಿದೊಳ್ಳಿತಾಯ್ತು. ತಿಳಿದೆ ನಾನೆಲ್ಲವನು. ಭದ್ರೇ ಅನಘನಾದಾನಂದನಿಗೆ ನೀರನಿತ್ತು ನೀನವನ ದಾಹವಡ

ಗಿಸಿದೆ. ಇನ್ನು ನಿನಗೆ ಜನನ ಮರಣಗಳ ಮೋಹ ತೃಷ್ಣೆಯುಂಟಾಗಲಾರದು" ಎಂದು ಹೇಳಿ ಅವಳಿಗೆ ಧರ್ಮೋಪದೇಶವನ್ನಿತ್ತು ಭಿಕ್ಷುಕೀ ಮಂದಿರದಲ್ಲಿ ನಿಲಿಸುವಂತೆ ಹೇಳುತ್ತಾನೆ.

ಚಂಡಾಲಿ ಭಿಕ್ಷುಣಿಯಾದಳು. ಭಿಕ್ಷುಮಂದಿರದಲ್ಲಿದ್ದ ಇತರ ಬ್ರಾಹ್ಮಣ ಸ್ತ್ರೀಯರಂತೆ ಶುದ್ಧ ಆಚಾರ ಸಂಪನ್ನಳಾಗಿ, ಶ್ರದ್ಧೆಯಿಂದ ಕುಳಿತು ಧರ್ಮತತ್ತ್ವವನ್ನು ಕೇಳುತ್ತಿದ್ದಳು. ಅವಳ ನೀತಿ ನಿಯಮಗಳನ್ನೂ ವಿನಯ ಭಕ್ತಿಗಳನ್ನೂ ನೋಡಿದ ಬ್ರಾಹ್ಮಣಕುಲದ ಭಿಕ್ಷುಣೀಯರು ಮತ್ತು ವೈಶ್ಯ ಶ್ರಮಣೆಯರು ದಿನದಿಂದ ದಿನಕ್ಕೆ ಅವಳನ್ನು ಹೆಚ್ಚು ಪ್ರೀತಿಸತೊಡಗಿದರು.

ಈ ಸುದ್ದಿ ನಗರವನ್ನು ತಲುಪಿತು. ಬ್ರಾಹ್ಮಣರ ಕೇರಿಗಳಲ್ಲಿ, ವೈಶ್ಯರ ಕೇರಿಗಳಲ್ಲಿ, ಮನೆ–ಮನೆಗಳಲ್ಲಿ ವ್ಯಾಪಿಸಿತು. ರಾಜನಿಗೂ ದೂರು ಹೋಯಿತು. ಪ್ರಜೆಗಳನ್ನು ಸಮಾಧಾನ ಪಡಿಸುವುದಕ್ಕಾಗಿ ಸ್ವತಃ ರಾಜನೇ ಬುದ್ಧಭಗವಾನನ ಹತ್ತಿರ ಈ ವಿಷಯವನ್ನು ವಿಚಾರಿಸುವುದಕ್ಕೆ ಹೊರಟ.

ರಾಜ ರಥದಿಂದ ಇಳಿದುಬಂದು ಬುದ್ಧನಿಗೆ ನಮಸ್ಕರಿಸಿ ಕುಳಿತ. ಶ್ರಮಣೆಯರು, ಭಿಕ್ಷುವರ್ಯರು ಎಲ್ಲರೂ ಬಂದು ಕುಳಿತರು.

ಬುದ್ಧನೇ ರಾಜನೊಡನೆ ಮಾತನಾಡುತ್ತಾನೆ: "ನೀನು ಬಂದದ್ದು ಮಾತಂಗಿಯ ವಿಷಯವನ್ನು ವಿಚಾರಿಸುವುದಕ್ಕಲ್ಲವೇ? ಅಯ್ಯೋ! ಜಾತಿ ಎನ್ನುವುದು ಎಂತಹ ವಿಡಂಬನೆ! ಪ್ರಾಣಿ ಇತರ ಪ್ರಾಣಿಗಳೊಡನೆ ಕಾದುವುದಿರಲಿ; ತನ್ನ ಪ್ರತಿಧ್ವನಿಯನ್ನೇ ಕೇಳಿ ಅದು ಶತ್ರುವಿನ ಧ್ವನಿಯೆಂದು ಕಾಳಗಕ್ಕೆ ಸಿದ್ಧವಾಗುತ್ತದೆ. ಅದರಂತೆ ಮನುಷ್ಯರೂ ಏಕೆ ಹೀಗೆ ವಿವೇಕ

ರಹಿತರಾಗುತ್ತಾರೆ? ಬ್ರಾಹ್ಮಣನ ಜನ್ಮವೂ ಇತರ ಎಲ್ಲ ಜನರ ಜನ್ಮದಂತೆಯೇ. ಅವನೇನು ಬಳ್ಳಿಯ ತುದಿಯಿಂದ ಉದಿಸಿ ಬರಲಿಲ್ಲ. ಮುಗಿಲಿನಿಂದ ಇಳಿದೂ ಬರಲಿಲ್ಲ. ಯಾಗಾಗ್ನಿಯಿಂದ ಹುಟ್ಟಲಿಲ್ಲ. ಮನುಷ್ಯ ಮನುಷ್ಯನಿಗೆ ಅಶುದ್ಧನೇ? ಇತರರಂತೆ ಅವನೂ ತಾನೆ? ಅವನು ಭೂಮಿಯ ಮೇಲಿರುವುದು ಪಾಪಕರವೇ? ನಿನ್ನಲ್ಲಿ ಸಲ್ಲದ್ದನ್ನು ಹೇಳಿಕೊಂಡು ಹೊಟ್ಟೆಹೊರೆಯುತ್ತಿರುವವರನ್ನು ಮೊದಲು ನೀನು ಹೊರಗಟ್ಟು. ನಿನ್ನೆ ಮಾಡಿದ ಅನಾಚಾರವೇ ಮೂಢರಿಗೆ ಇಂದಿಗೆ ಆಚಾರವಾಗುತ್ತದೆ. ನಾಳೆ ಅದೇ ಶಾಸ್ತ್ರವಾಗುತ್ತದೆ. ತಾವು ಯಾರು? ಏತಕ್ಕೆ ಇಲ್ಲಿಗೆ ಬಂದಿದ್ದೇವೆ? ಎನ್ನುವುದನ್ನು ಅರಿಯದ ಜನ ಕುರುಡರು ಕುರುಡರಿಗೆ ದಾರಿ ತೋರುವಂತೆ ಅವರನ್ನು ಅಜ್ಞಾನದ ಕಾಡಿಗೆ ಕರೆದೊಯ್ಯುತ್ತಾರೆ. ಮನುಷ್ಯ ಮೃಗವಾಗಿ, ಪಕ್ಷಿಯಾಗಿ, ವೃಕ್ಷವಾಗಿ ಲಕ್ಷಜನ್ಮಗಳನ್ನು ಪಡೆದು ಕಡೆಗೆ ನರನಾಗಿ ಹುಟ್ಟುತ್ತಾನೆ. ಮಾನವ ಇದನ್ನು ಜನನ ಮರಣ ಶೃಂಖಲೆಯ ಕಡೆಯ ಕೊಂಡಿಯನ್ನಾಗಿ ಮಾಡಿಕೊಳ್ಳಬೇಕು. ಜಾತಿ–ಜಾತಿ ಎಂದು ಮನುಷ್ಯ ಯಾವುದರಿಂದ ತನ್ನೊಳಗೆ ಭೇದವನ್ನು ಕಲ್ಪಿಸಿಕೊಳ್ಳುತ್ತಿದ್ದಾನೋ ಆ ಜಾತಿ ಶಾಶ್ವತವಾದುದಲ್ಲ. ಕ್ಷಣ ಕ್ಷಣಕ್ಕೂ ಬಣ್ಣವನ್ನು ಬದಲಾಯಿಸುವ ಸಂಜೆಯ ಹೊತ್ತಿನ ಆಕಾಶದಂತೆ ಅದು. ಒಂದೇ ಕುಟುಂಬದ ಬೇರುಗಳಂತಿರುವ ಬಂಧುಗಳನ್ನು ಜಾತಿ ವಿಭಜಿಸುತ್ತದೆ. ಇದರಿಂದಾಗಿ ಜನರು ತಮ್ಮ ತಮ್ಮಲ್ಲೇ ಪಂಗಡಗಳಾಗಿ ಒಡೆಯುತ್ತಾರೆ. ದೇಶನಾಶಕ್ಕೆ ಕಾರಣವಾಗುತ್ತದೆ. ದೇಶಗಳ ನಾಶದಿಂದ ಇಡೀ ಲೋಕವೇ ನಾಶವಾಗುತ್ತದೆ. ತನ್ನ ಆಶ್ರಿತರನ್ನೇ ನುಂಗುವ ಇಂತಹ ಕಷ್ಟಜ್ವಾಲೆಯನ್ನು ಆರಾಧಿಸಬೇಡ.

ಈರ್ಷ್ಯೆಯಿಂದೊಡಗೂಡಿದ ಮಾರಿಸದೃಶವಾದ ಜಾತಿಯನ್ನು ಮನ್ನಿಸಬೇಡಿ. ಜೀವಿಯನ್ನು ಕೀಳುಮಾಡುವ ದೋಷ ಇದರಲ್ಲಿ ಅಡಗಿದೆ. ಜಾತಿಯೆಂಬ ರಾಕ್ಷಸಿಯನ್ನು ಗೆದ್ದರೆ ನರಕದ ದ್ವಾರ ಮುಚ್ಚಿದಂತೆ. ಲೋಕ ಉದಯವಾಗುವುದು ಪ್ರೀತಿಯಿಂದ. ಲೋಕದ ಉನ್ನತಿಯಿರುವುದೂ ಪ್ರೇಮದಿಂದಲೇ.

'ಸ್ನೇಹಂ ತಾನ್ ಶಕ್ತಿ ಜಗತ್ತಿಲ್-ಸ್ವಯಂ
ಸ್ನೇಹಂ ತಾನಾನಂದ ಮಾರ್ಕುಂ
ಸ್ನೇಹಂ ತಾನ್ ಜೀವಿತಂ ಶ್ರೀಮನ್-ಸ್ನೇಹ
ವ್ಯಾಹತಿ ತನ್ನೆ ಮರಣಂ
ಸ್ನೇಹಂ ನರಕತ್ತಿನ್ ದ್ವೀಪಿಲ್—ಸ್ವರ್ಗ
ಗೇಹಂ ಪಣಿಯುಂ ಪಟುತ್ವಂ'

"ಪ್ರೇಮವೇ ಜಗದ ಶಕ್ತಿ. ಸಕಲ ಜೀವಿರಾಶಿಗಳ ಆನಂದ ಇರುವುದು ಪ್ರೇಮದಲ್ಲಿ. ಪ್ರೇಮ, ಜೀವನದ ಸಂಪತ್ತು. ಪ್ರೇಮನಾಶವೇ ಮರಣ. ಪ್ರೇಮ ನರಕದಲ್ಲೂ ಸ್ವರ್ಗಮಂದಿರವನ್ನು ನಿರ್ಮಿಸುತ್ತದೆ. ಆದ್ದರಿಂದ ಭೂಮಿಯ ಮೇಲೆ ಜನಿಸಿದ ಪ್ರತಿಯೊಬ್ಬನೂ ಸಮಾನನು. ಯಾರೂ ಮೇಲಲ್ಲ, ಯಾರೂ ಕೀಳಲ್ಲ. ಎಲ್ಲರನ್ನೂ ಪ್ರೀತಿಯಿಂದ ಕಾಣುವುದೇ ಮಾನವ ಧರ್ಮ".

ಬುದ್ಧನ ಈ ಉಪದೇಶವಾಣಿಯನ್ನು ಕೇಳಿದ ರಾಜ ತಲೆಬಾಗಿ ನಮಸ್ಕರಿಸಿದ. ಗುರುವಿನ ಉಪದೇಶಾಮೃತ ಅವನ ಮನಸ್ಸಿನ ಮೇಲೆ ಪರಿಣಾಮವುಂಟುಮಾಡಿತ್ತು. ಅವನು ಅಲ್ಲಿಂದ ಅರಮನೆಗೆ ಹಿಂದಿರುಗಿದ. ಭಗವಾನ್ ಬುದ್ಧನ ಶಾಂತವಾಣಿಯಿಂದ ಮುಂದೆ ಹತ್ತು ಶತಾಬ್ದಿಗಳು ಭಾರತದಲ್ಲಿ ಶಾಂತಿ ನೆಲಸಿತ್ತು.

ಕರುಣ

ಕುಮಾರನಾಶಾನರ ಕೊನೆಯ ಖಂಡಕಾವ್ಯ. ಇದರ ರಚನೆ ಕ್ರಿ.ಶ. 1924ರಲ್ಲಿ. ಡಾ॥ ಪಾಲ್ ಕ್ಯಾರೆಸ್ ಎನ್ನುವ ಅಮೆರಿಕ ಪಂಡಿತನ 'ದಿ ಗಾಸ್ಪೆಲ್ ಆಫ್ ಬುದ್ಧ' ಎನ್ನುವ ಗ್ರಂಥದಿಂದ ಕಥಾವಸ್ತುವನ್ನು ಸ್ವೀಕರಿಸಿರುವುದು.

'ಉತ್ತರಮಧುರಾಪುರಿಕ್ಕುತ್ತರೋಪಾಂತತ್ತಿಲುಳ್ಳ
ವಿಸ್ತೃತರಾಜವೀಥಿತನ್ ಕಿ಴ಕ್ಕರಿಗಿಲ್'

'ಉತ್ತರ ಮಧುರಾಪುರಿಯ ಉತ್ತರದಿಕ್ಕಿನ ರಾಜಬೀದಿಯ ಪೂರ್ವಭಾಗದಲ್ಲಿ' ಭೂರಂಭೆಯಂತಿದ್ದ ವೇಶ್ಯಾರತ್ನ ವಾಸವದತ್ತೆಯನ್ನು ಮಧುರಾಪುರಿಯಲ್ಲಿ ಅರಿಯದವರೇ ಇಲ್ಲ. ವಾಸವದತ್ತೆ ಬುದ್ಧನ ಶಿಷ್ಯನಾದ ಉಪಗುಪ್ತನಲ್ಲಿ ಅನುರಕ್ತಳಾಗುತ್ತಾಳೆ. ಉಪಗುಪ್ತನನ್ನು ಹೇಗಾದರೂ ವಶಪಡಿಸಿಕೊಳ್ಳಬೇಕೆನ್ನುವ ಉದ್ದೇಶದಿಂದ ತನ್ನ ದಾಸಿಯನ್ನು ಉಪಗುಪ್ತನ ಬಳಿಗೆ ಕಳುಹಿಸಿ ಕಾಮೋಪಭೋಗಗಳಲ್ಲಿ ಪಾಲುಗೊಳ್ಳಲು ತನ್ನ ನಿವಾಸಕ್ಕೆ ಆಹ್ವಾನಿಸುತ್ತಾಳೆ. ಉಪಗುಪ್ತ 'ಅದಕ್ಕಿನ್ನೂ ಕಾಲ ಕೂಡಿ ಬಂದಿಲ್ಲ' ಎಂದಷ್ಟೇ ಹೇಳಿ ಕಳುಹಿಸುತ್ತಾನೆ. ನಾಲ್ಕು ತಿಂಗಳುಗಳು ಕಳೆದಿರುತ್ತವೆ. ಅಷ್ಟರಲ್ಲಿ ವಾಸವದತ್ತೆ ಒಬ್ಬ ಕಾಮುಕನೊಡಗೂಡಿ ಮತ್ತೊಬ್ಬ ಕಾಮುಕನ ಕೊಲೆಗೆ ಕಾರಣಳಾಗುತ್ತಾಳೆ. ಕೊಲೆಯ ಅಪರಾಧಕ್ಕೆ ಶಿಕ್ಷೆಗೊಳಗಾಗುತ್ತಾಳೆ.

'ನೃಪನ ಕಿಂಕರರು ಕೈಕಾಲು ಕಿವಿಮೂಗುಗಳ ಕೊಯ್ದು
ತಳ್ಳಿದರು ನರಕವಹ ಸುಡುಗಾಡಿನೊಳವಳ'

ಅವಯವಗಳನ್ನು ಕಳೆದುಕೊಂಡು ಉಸಿರಾಡುತ್ತ ಬಿದ್ದಿದ್ದ ಮಾಂಸದ ಮುದ್ದೆಯಾಗಿರುತ್ತಾಳೆ.

'ರುಧಿರಾಕ್ತಮಾಯ ವಿಲ್ಪಾನೊರುಕ್ಕಿಜುಟ್ಟ ಕುಂಕುಮ
ಪ್ಪೊದಿಪೋಲೆ ಕಿಡಕ್ಕುನ್ನುಪದಚ್ಚುಮೂಡಿ'

ರಕ್ತದಿಂದ ತೊಯ್ದ ಅವಳ ದೇಹವನ್ನು ಮುಚ್ಚಿ ಮಲಗಿಸಿರುವುದು ಮಾರಾಟಕ್ಕಿಟ್ಟ ಕುಂಕುಮದ ಗಂಟಿನಂತೆ ಕಾಣಿಸುತ್ತದೆ. ಅವಳ ಪ್ರೀತಿಪಾತ್ರಳಾದ ದಾಸಿ ಶುಶ್ರೂಷೆಮಾಡುತ್ತ ವಾಸವದತ್ತೆಯ ಸನಿಹದಲ್ಲೇ ಇರುತ್ತಾಳೆ.

ಸ್ವಲ್ಪ ಹೊತ್ತಿನ ಹಿಂದೆ ಮಧುರಾಪುರಿಯ ಧನಿಕರು ಹೊಂದೇರುಗಳಲ್ಲಿ ಬಂದು ಕನಕಾಭಿಷೇಕ ಮಾಡುತ್ತಿದ್ದ ದೇಹಕ್ಕೆ ಬಂದ ಗತಿ ಇದು. ಯಾವ ಧನಿಕರ ಮುಂದೆ ಬಳ್ಳಿಯಂತೆ ನರ್ತಿಸಿದುವೋ ಅದೇ ಕಾಲುಗಳು ದೇಹದ ಸಂಬಂಧವನ್ನು ಕಳೆದುಕೊಂಡು ಬಿದ್ದಿವೆ. ಕಣ್ಣುಗಳು ನೀರಾಡುತ್ತಿವೆ.

ಅಷ್ಟು ಹೊತ್ತಿಗೆ ಸಮಸ್ತ ಜೀವರಾಶಿಗಳನ್ನೂ ಸಹೋದರ ಪ್ರೇಮದಿಂದ ನೋಡಿದ ಬುದ್ಧ ಭಗವಾನನ ಶಿಷ್ಯನೂ, 'ಅದಕ್ಕಿನ್ನೂ ಕಾಲ ಕೂಡಿಬಂದಿಲ್ಲ' ಎಂದು ಹೇಳಿ ಕಳುಹಿಸಿದ್ದವನೂ, ವಾಸವದತ್ತೆ ಪ್ರೇಮಿಸಿದ್ದ ತೇಜೋಮೂರ್ತಿಯೂ ಆದ ಉಪಗುಪ್ತ ಅಲ್ಲಿಗೆ ಬರುತ್ತಾನೆ. ವಾಸವದತ್ತೆಯನ್ನು "ಕಾಮರಾಜ್ಯದಲ್ಲಿ ಈ ನಾರೀಮಣಿಗೆ ಬೆಲೆಕಟ್ಟಿದವರೇ ಇಲ್ಲ. ಆ ದಿನ ಸಂಜೆಯ ಹೊತ್ತಿನಲ್ಲಿ ಹೂವಿನಂಗಳದಲ್ಲಿ ನಾನು ಕಂಡ ವಿಶ್ವಮೋಹಿನಿ ಇವಳು" ಎಂದು ಗುರುತಿಸುತ್ತಾನೆ. ಅವಳ ಹತ್ತಿರ ಬಂದು ಕುಳಿತು "ಸೋದರೀ ಲೌಕಿಕ ಸುಖ ನಶ್ವರ ಎನ್ನುವುದನ್ನು ತಿಳಿದೆಯಲ್ಲವೇ ? ಯಾವ ಕಳ್ಳನಿಂದಲೂ ಅಪಹರಿಸಲು ಸಾಧ್ಯ

ವಿಲ್ಲದಂತಹ ಶಾಂತಿಧನವನ್ನು ಗುರುವಿನ ಕರುಣೆಯಿಂದ ನೀನು ಇಂದು ಸಂಪಾದಿಸಬಹುದು."

'ಕರಯಾಯ್ಕ ಭಗಿನಿ ನೀ ಕಳಗ ಧೀರುತ ಶಾಂತಿ
ವರುಂ ನಿನ್ನೆ ವಾರ್ ನೆರುಗ ಞಾನ್ ತಲೋಡುವಾನ್'

"ಅಳಬೇಡ ಸೋದರೀ! ಮನಸ್ಸಿನ ಅಧೈರ್ಯವನ್ನು ಕೈಬಿಡು. ನಿನಗೆ ಶಾಂತಿ ಲಭಿಸುತ್ತದೆ. ಇದೋ ನಿನ್ನ ತಲೆಯನ್ನು ನೇವರಿಸುತ್ತಿದ್ದೇನೆ- ಅಷ್ಟಮಾರ್ಗವನ್ನುಪದೇಶಿಸಿದ ಬುದ್ಧ ದೇವನ ಪಾದಗಳನ್ನು ತೊಳೆದ ನನ್ನ ಕೈಗಳಿಂದ."

ವಾಸವದತ್ತೆ ಉಪಗುಪ್ತನ ಉಪದೇಶವಾಣಿಯನ್ನುಕೇಳುತ್ತಾ ಕೇಳುತ್ತಾ ನಿರ್ವಾಣವನ್ನು ಪಡೆಯುತ್ತಾಳೆ.

'ಪರಿನಿರ್ವಾಣಯಾಯ್ ತನ್ ಪ್ರಿಯ ಸ್ವಾಮಿನಿಯೆನೋಕ್ಕಿ
ಪರಿಚಾರಿಕ ಪಾವಿಟ್ಟು ವಿಳಿಚ್ಚುಕೇಣು'

ಪರಿನಿರ್ವಾಣ ಹೊಂದಿದ ತನ್ನ ಪ್ರಿಯ ಸ್ವಾಮಿನಿಯನ್ನು ನೋಡುತ್ತ ವಾಸವದತ್ತೆಯ ದಾಸಿ ಗಟ್ಟಿಯಾಗಿ ಅಳಲಾರಂಭಿಸುತ್ತಾಳೆ. ಉಪಗುಪ್ತ ಅವಳನ್ನೂ ಸಂತೈಸಿ ಶಾಂತಿಮಂತ್ರವನ್ನುಪದೇಶಿಸಿದ. ಅನಂತರ ಅವರು ವಾಸವದತ್ತೆಯ ದೇಹ ದೇಹಾಂಗಗಳನ್ನು ಒಟ್ಟಿಗೆ ತೆಗೆದುಕೊಂಡು ಹೋಗಿ ಉಪನದಿಯ ದಡದಲ್ಲಿ ಚಿತೆಯ ಮೇಲೆರಿಸಿದರು. ನಿರ್ಲಿಪ್ತನೂ ಪರಮ ಜ್ಞಾನಿಯೂ ಆದ ಉಪಗುಪ್ತನ ಕಣ್ಣಿನಿಂದಲೂ ನೀರು ತೊಟ್ಟಿಕ್ಕುತ್ತದೆ- ವಾಸವದತ್ತೆಯನ್ನು ದಹಿಸಿದ ಚಿತಾಭಸ್ಮದ ಮೇಲೆ.

"ಕರುದಾಂ ಮಟ್ಟೊನ್ನಿಲ್ಲದು 'ಕರುಣ' ತನ್‌ಕಯತ್ತಿಲೆ
ಪರಿಣತೋಜ್ವಲ ಮುಕ್ತಾಫಲಮಲ್ಲಾದೆ"

ಉಪಗುಪ್ತನ ಕಣ್ಣಿನಿಂದ ಉರುಳಿದ ಅಶ್ರುಬಿಂದುಗಳು 'ಕರುಣೆ'ಯ ಮಡುವಿನಲ್ಲಿ ಮೂಡಿಬಂದ ಮುತ್ತುಗಳಲ್ಲದೆ ಬೇರೆ ಅಲ್ಲ.

ಅಶುದ್ಧವೂ ಅನಿಯಂತ್ರಿತವೂ ಆದ ಕಾಮದಿಂದ ಉಂಟಾಗುವ ಪರಿಣಾಮ ಅಷ್ಟೆ. 'ಶ್ರೀಭೂವಿಲಸ್ಥಿರಂ ಅಸಂಶಯಂ' (ವೀಣಪೂವು) ಐಶ್ವರ್ಯದಲ್ಲೂ ಭೋಗ ಜೀವನದಲ್ಲೂ ಶಾಶ್ವತ ಶಾಂತಿ ಲಭಿಸುವುದಿಲ್ಲ. ಮೋಕ್ಷದ ಮೊದಲ ಮೆಟ್ಟಿಲು ಧರ್ಮ. ಧರ್ಮದ ತಳಹದಿ ದಿವ್ಯಪ್ರೇಮ ಎನ್ನುವುದನ್ನು ಆಶಾನರು ಈ ಕಾವ್ಯದಲ್ಲಿ ಪ್ರತಿಪಾದಿಸಿದ್ದಾರೆ.

# ಉಪಸಂಹಾರ

ಸಂಸ್ಕೃತ ಸಾಹಿತ್ಯದಿಂದ, ಇಂಗ್ಲಿಷ್ ಸಾಹಿತ್ಯದಿಂದ ಮತ್ತು ಬೌದ್ಧ ಸಾಹಿತ್ಯದಿಂದ ಕಥಾವಸ್ತುಗಳನ್ನಾಯ್ದುಕೊಂಡು ಮಲಯಾಳದಲ್ಲಿ ಖಂಡ ಕಾವ್ಯಗಳನ್ನು ರಚಿಸಿದ ಕುಮಾರನಾಶಾನರ ಬದುಕನ್ನೇ ಒಂದು ಕಾವ್ಯವೆನ್ನಬಹುದು. ಸಮಾಜ ಸುಧಾರಣೆ ಧರ್ಮ ಪ್ರಚಾರ, ಸಾಹಿತ್ಯ ಸೃಷ್ಟಿ – ಈ ತ್ರಿವೇಣಿ ಸಂಗಮದಿಂದ ಕೂಡಿದುದಾಗಿತ್ತು ಅವರ ಬದುಕು. ಪ್ರೇಮ, ಕರುಣೆ, ಶಾಶ್ವತ ಶಾಂತಿ ಮತ್ತು ಆನಂದವನ್ನು ಆಶಾನರು ಅನ್ವೇಷಿಸಿರುವುದು ಅವರ ಕಾವ್ಯಗಳಲ್ಲಿ ಎದ್ದು ಕಾಣುವ ಮುಖ್ಯ ಅಂಶಗಳು.

"ವೀಣಪೂವು ಕಾವ್ಯದಿಂದ ಹಿಡಿದು 'ಕರುಣ' ಕಾವ್ಯಗಳ ವರೆಗಿನ ಕೃತಿಗಳಲ್ಲೆಲ್ಲ ಒಂದು ದೃಷ್ಟಿಯ ಕರುಣೆಯ ನಿರಂತರ ಪ್ರವಾಹ ಕಂಡು ಬರುತ್ತದೆ. ಬಾಡಿ ಮಣ್ಣಾಗುವ ಹೂವಿಗೆ ಸಂಬಂಧಿಸಿದಂತೆ ಪ್ರೇಮಭಂಗದ ಜ್ವಾಲೆಯಲ್ಲಿ ಹೋಮವಾಗಿ ಹೋದ ಲೀಲಾ, ನಳಿನಿಯರಿಗೆ ಸಂಬಂಧಿಸಿದಂತೆ – ರಾಜನೀತಿಯ ಕಠೋರತೆಯಿಂದ ವನವಾಸ ಕ್ಲೇಶವನ್ನನುಭವಿಸಬೇಕಾಗಿ ಬಂದ ಸೀತೆಗೆ ಸಂಬಂಧಿಸಿದಂತೆ – ಪಾಪಾತ್ಮಳಾದರೂ ಪಶ್ಚಾತ್ತಾಪವನ್ನು ಅನುಭವಿಸಿದ ವಾಸವದತ್ತೆಗೆ ಸಂಬಂಧಿಸಿದಂತೆ – ಭಿಕ್ಷುಣೀ ಮಂದಿರದಲ್ಲಿ ಪ್ರವೇಶ ಪಡೆದ ಚಂಡಾಲ ಕನ್ನಿಕೆಯೊಬ್ಬಳಿಗೆ ಸಂಬಂಧಿಸಿದಂತೆ ಆ ಕಾರುಣ್ಯ ನಿರಂತರವಾಗಿ ಪ್ರವಹಿಸಿದೆ." *

---

* ಎಸ್. ಗುಪ್ತನ್‌ನಾಯರ್ : ಚಂಡಾಲ ಭಿಕ್ಷುಕಿ, ಮುನ್ನುಡಿ ಪುಟ 8

ವ್ಯಕ್ತಿ ಸ್ವಾತಂತ್ರ್ಯವುಳ್ಳ ಸ್ತ್ರೀಯರು ಆಶಾನರ ಕಾವ್ಯಗಳ ಕಥಾನಾಯಕಿಯರೂ; ಲೌಕಿಕ ಪ್ರೇಮದಿಂದ ದಿವ್ಯ ಪ್ರೇಮದ ಕಡೆಗೆ ಅವರನ್ನು ಕೊಂಡೊಯ್ಯಲು ಅನುಕೂಲವಾದ ಕಥಾವಸ್ತುಗಳನ್ನಾಯ್ದುಕೊಂಡು ಆಶಾನರು ಕಾವ್ಯಗಳನ್ನು ಸೃಷ್ಟಿಸಿರುವುದು. ದಿವಾಕರನನ್ನು ಪ್ರೇಮಿಸಿದ ನಳಿನಿ ದಿವಾಕರನ ಸನ್ನಿಧಿಯಲ್ಲಿ ಇಹಲೋಕವನ್ನು ತ್ಯಜಿಸುವುದು, ಲೀಲಾ ಕೌಮಾರ್ಯದಲ್ಲಿ ಪ್ರೇಮಿಸಿದ್ದ ಮದನನ ಅನುರಾಗದಿಂದ ಹುಚ್ಚಿಯಂತಾಗಿ ಅವನು ತಿರುಗಿದ ದಿಕ್ಕಿನಲ್ಲೆಲ್ಲ ತಿರುಗಿ ಆತ್ಮಾರ್ಪಣೆ ಮಾಡಿಕೊಳ್ಳುವುದು, ಕಾಮದ ಕೆಸರಿನಲ್ಲಿ ಬಿದ್ದ ವಾಸವದತ್ತೆ, ಉಪಗುಪ್ತನ ಪ್ರೇಮವನ್ನು ಯಾಚಿಸಿ ವಿಫಲಳಾಗಿ ಸುಡುಗಾಡಿನಲ್ಲಿ ಅದೇ ಉಪಗುಪ್ತನಿಂದ ನಿರ್ವಾಣ ಪಡೆಯುವುದು, ಸೀತೆ ರಾಮನ ಮೇಲಿನ ಪ್ರೇಮವನ್ನು ಶಾಶ್ವತ ಶಾಂತಿಯ ಕಡೆಗೆ ತಿರುಗಿಸುವುದು, ಆನಂದನ ಮೇಲಿನ ಅನುರಾಗದಿಂದಾಗಿ ಚಂಡಾಲ ಕನ್ಯೆ ಭಿಕ್ಷುಣಿ ಮಂದಿರವನ್ನು ಪ್ರವೇಶಿಸುವುದು – ಇವುಗಳಲ್ಲೆಲ್ಲ ಲೌಕಿಕ ಪ್ರೇಮವನ್ನು ಅಧ್ಯಾತ್ಮದ ಕಡೆಗೆ ತಿರುಗಿಸಿ ಸತ್-ಚಿತ್-ಆನಂದ ದರ್ಶನವನ್ನು ಕುಮಾರನಾಶಾನರು ಮೇಲಿನ ಕಥಾನಾಯಕಿಯರ ಮೂಲಕ ನೀಡಿರುವುದು. ಸಾವಿತ್ರಿಗೊದಗಿದ ದುರವಸ್ಥೆಯಲ್ಲೂ ಅವಳ ಬದುಕಿಗೆ ಒಂದು ವ್ಯವಸ್ಥೆ ಕಂಡು ಬರುವಂತೆ ಮಾಡಿ ದುರವಸ್ಥ ಕಾವ್ಯವನ್ನು ರಚಿಸಿದಾಗ ಒಂದು ವರ್ಗದ ಕಟು ಟೀಕೆಯನ್ನೂ ಈ ಕವಿ ಎದುರಿಸಬೇಕಾಗಿ ಬಂದಿತು. ಒಟ್ಟಿನಲ್ಲಿ ಲೌಕಿಕ ಪ್ರೇಮದ ಅಣುವಲಯದಿಂದ ಹೊರಟು ವಿಶ್ವವ್ಯಾಪಕ ಪ್ರೇಮದ ಮಹಾವಲಯದ ದರ್ಶನವನ್ನು ನೀಡಲು ಅನೇಕ ದೃಷ್ಟಿಕೋನಗಳಿಂದ ವೀಕ್ಷಿಸಿ ರಚಿಸಿದ ಕಾವ್ಯಗಳು ಆಶಾನರ ಖಂಡಕಾವ್ಯಗಳು.

